ಶ್ರೀರಂಗ-ಸಾರಸ್ವತ ೬

# ಸಂಸಾರಿಗ ಕಂಸ

(ನಾಲ್ಕಂಕಗಳ ನಾಟಕ)

ಶ್ರೀರಂಗ

ರಂಗ-ಮಂಗ ಪ್ರಕಾಶನ,
ಧಾರವಾಡ

೧೯೪೫ ] [ ಬೆಲೆ: ೧-೮-೦

# ಅರಿಕೆ



ಸದ್ಯದ ನಾಟಕವನ್ನು ಬರೆದದ್ದು ಕೆಲವು ವರ್ಷಗಳ ಮುಂಚಿತ-ವಾಗಿಯೆ. ಒಂದು ದೃಷ್ಟಿಯಿಂದ ಹೇಳುವುದಾದರೆ, **ಸಂಸಾರಿಗ ಕಂಸ** ಮತ್ತು ಹರಿಜನ್ವಾರ ಎರಡೂ ಏಕಕಾಲಕ್ಕೆ— ಸಮಾಂತರವಾಗಿ— ಬರೆಯಲ್ಪಟ್ಟವು. ಎರಡರಲ್ಲೂ ಒಂದೇ ಸಮಸ್ಯೆ, ನಿರೂಪಿಸಿದ ರೀತಿ ಮಾತ್ರ ಬೇರೆ; ಒಂದೇ ದೃಶ್ಯದ ಇಡಿಯ ಅಂಕವನ್ನು ಮೊದಲು ಬರೆದುದು ಈ ನಾಟಕದಲ್ಲಿಯೆ. ಇಷ್ಟು ತಡವಾಗಿ ಪ್ರಕಟವಾದುದೆಂದು ನೊಂದು-ಕೊಳ್ಳುವುದಕ್ಕಿಂತ ಈಗಲಾದರೂ ಪ್ರಕಟವಾಯಿತಲ್ಲ ಎಂದು ಸಮಾಧಾನ-ವನ್ನು ತಂದುಕೊಳ್ಳಬೇಕಾಗಿದೆ.

ಈ ನಾಟಕವನ್ನು ಕೇವಲ ಧಾರವಾಡದಲ್ಲಿ ಮಾತ್ರ ಎರಡು ಸಲ ಪ್ರಯೋಗಿಸಲಾಗಿದೆ. ಮೊದಲ ಸಲ ನಾಟಕ ಯಾರಿಗೂ ತಿಳಿಯಲಿಲ್ಲ ಎಂಬ ತಕರಾರು ಬಂದಿತು; ಎರಡನೆಯ ಸಲ— ನಾಡಹಬ್ಬದ ಉತ್ಸವದಲ್ಲಿ— ನಾಟಕ ಯಾರಿಗೂ ಕೇಳಿಸಲಿಲ್ಲ!

ಕೊನೆಯ ಅಂಕನ್ನು ಎರಡು ವಿಧವಾಗಿ ಮೂಲದಲ್ಲಿಯೆ ಬರೆದಿದೆ. ಪ್ರಯೋಗಕ್ಕೆ ಯಾವುದು ಅನುಕೂಲವೆನ್ನಿಸುವುದೊ ಅದೊಂದನ್ನೆ ಪ್ರಯೋಗಕಾರರು ಆಯ್ದುಕೊಳ್ಳಬಹುದು.

ಮುದ್ರಣಾಲಯದ ತೊಂದರೆಯ ಹಾವಳಿಯಿದ್ದ ಈಗಿನ ಕಾಲದಲ್ಲಿ ಶ್ರೀ. ಜತಾರರು ಮುಂದಾಗಿ ಇದನ್ನು ಮುದ್ರಿಸಿದುದಕ್ಕಾಗಿ ನಾವು ಅವರಿಗೆ ತುಂಬಾ ಋಣಿಯಾಗಿದ್ದೇವೆ.

—ಪ್ರಕಾಶಕರು.

# ಶ್ರೀರಂಗರ ಇತರ ಕೃತಿಗಳು



| | | |
|---|---|---|
| ೧. | ಉದರವೈರಾಗ್ಯ* | (ನಾಟಕ) |
| ೨. | ವೈದ್ಯರಾಜ* | ,, |
| ೩. | ದರಿದ್ರನಾರಾಯಣ* | ,, |
| ೪. | ಪರಮೇಶ್ವರ ಪುಲಕೇಶಿ* | ,, |
| ೫. | ಹರಿಜನ್ವಾರ* | ,, |
| ೬. | ನರಕದಲ್ಲಿ ನರಸಿಂಹ* | ,, |
| ೭. | ಸಂಧ್ಯಾಕಾಲ | ,, |
| ೮. | ಪೂರ್ವರಂಗ | (ಏಕಾಂಕ ಸಂಗ್ರಹ) |
| ೯. | ಕಾಮದಹನ | ,, |
| ೧೦. | ಜೀವನರಂಗ | ,, |
| ೧೧. | ನಿರಾಹಾರ | ,, |
| ೧೨. | ಸ್ವಲ್ಪದ್ರಲ್ಲಿ ಸ್ವಾರಸ್ಯ | (ಹರಟೆಗಳು) |
| ೧೩. | ನಗೆ | (ವಿಮರ್ಶಾ ಪ್ರಬಂಧ) |
| ೧೪. | ಆಹ್ವಾನ | (ಕವನಸಂಗ್ರಹ) |
| ೧೫. | ವಿಶ್ವಾಮಿತ್ರನ ಸೃಷ್ಟಿ* | (ಕಾದಂಬರಿ) |
| ೧೬. | ಕೆಮಾಲ ಪಾಶಾ* | (ಜೀವನಚರಿತ್ರೆ) |
| ೧೭. | ಗೀತಾಗಾಂಭೀರ್ಯ | |

* ಈ ಗುರುತಿನ ಪ್ರತಿಗಳು ತೀರಿವೆ.

## ಬೇಗನೆ ಪ್ರಕಟವಾಗಲಿವೆ

| | |
|---|---|
| ಪ್ರಪಂಚ ಪಾಣಿಪತ್ತು | (ನಾಲ್ಕಂಕಗಳ ನಾಟಕ) |
| ಜರಾಸಂಧಿ | (ಮೂರಂಕಗಳ ,, ) |

# ಸಂಸಾರಿಗ-ಕಂಸ

## ಮೊದಲನೆಯ ಅಂಕ

( ರಾತ್ರಿ ೮ ಗಂಟೆಯ ಸಮಯ. "ಸಂಸ್ಥಾನಿಕ" ಶೀನಣ್ಣನವರ ಮನೆಯ ಮುಂಬದಿಯ– ಎಂದರೆ, ಬಳಲಿ ಬಡವಾದ ದೇಹಕ್ಕೆ ಬುದ್ಧಿಯಿಂದ ಜಡವಾದ ತಲೆಯಂತೆ ಹಣಿಕಿಕ್ಕಿ ನಿಂತಿರುವ– ಕೋಣೆ. ಸದ್ಯಕ್ಕೆ ಇದೊಂದು ಕೋಣೆಯೆಂದು ತಿಳಿಯುವಂತಿಲ್ಲ. ಕತ್ತಲೆ ಕವಿದಿದೆ. ಆಗಾಗ್ಗೆ ದೂರಿನಲ್ಲಿ ಹೊಳೆಯುವ ಮಿಂಚಿನ ಬೆಳಕಿನಲ್ಲಿ ಕಿಟಕಿಯೊಂದು ಬಲಬದಿಗೆ ಕಂಡುಬರುವದು. ಕೆಲಹೊತ್ತಿನಲ್ಲಿ ಬಲಬದಿಯಿಂದ ಯಾರೋ ನಡೆದುಬರುತ್ತಿರುವ ಸಪ್ಪಳ. ಕಡ್ಡಿಯೊಂದನ್ನು ಕೊರೆಯುವಾಗ್ಗೆ ಆ ಬೆಳಕಿನಲ್ಲಿ ವ್ಯಕ್ತಿಯು ತರುಣಮುಖವು ಕಾಣುವದು. ಇಷ್ಟರಲ್ಲಿ ಕಡ್ಡಿಯು ಆರುವದು. ತರುಣನು ಕಡ್ಡಿಗಳನ್ನು ಕೊರೆಯುತ್ತ, ಅವು ಆರಿದಂತೆ ಅವುಗಳನ್ನು ತನ್ನಷ್ಟಕ್ಕೆ ಎಣಿಸುತ್ತ ಹೋಗುವನು. "ಐದು." ಕಿಟಕಿಯು ಫಟ್ಟೆಂದು ಗಾಳಿಯಿಂದ ದೂಡುವದು. ತರುಣನು ಅಬ್ಬರದಿಂದ ಕಡ್ಡಿಯ ಪೆಟ್ಟಿಗೆಯನ್ನು ಅಲ್ಲಿಯೆ ಒಗೆದು ಕಿಟಕಿಯನ್ನು ಬಲವಾಗಿ ಮುಚ್ಚುವನು. ಆರನೆಯ ಕಡ್ಡಿಯಿಂದ ಕಿಟಕಿಯ ಮಗ್ಗಲಿನಲ್ಲಿರುವ ಸಣ್ಣ ಮೇಜಿನ ಮೇಲಿನ ದೀಪವನ್ನು ಹೊತ್ತಿಸುವನು. ಕೂಡಲೆ ಬಲಬದಿಗೆ ಒಳಕ್ಕೆ ಹೋಗುವ ಬಾಗಿಲು, ಈ ಬಾಗಿಲು ಮತ್ತು ಕಿಟಕಿಯ ನಡುವೆ ಒಂದು ಕುರ್ಚಿ, ಅದರ ಹಿಂದೆ ಪುಸ್ತಕಗಳಿಂದ ಮುಚ್ಚಿದ ಇನ್ನೊಂದು ಸಣ್ಣ ಮೇಜು; ದೀಪದ ಎಡಬದಿಗೆ ಒಂದು ಆರಾಮಕುರ್ಚಿ, ಅಲ್ಲಿಂದ ಎಡಬದಿಯಲ್ಲಿಯ ಮನೆಯಿಂದ ಹೊರಕ್ಕೆಬೀಳುವ ಬಾಗಿಲಿನ ವರೆಗೆ ಒಂದು ಹಾಸಿಗೆ, ಅದರ ಮೇಲೆ ಕೆಲವು ವೃತ್ತಪತ್ರಗಳು, ಹಿಂದೆ ಗೋಡೆಗೆ ಉದ್ದವಾದೊಂದು ತಕ್ತೆ; ಹೊರಬಾಗಿಲನ್ನು ತೆರೆದು, ಮುಖಕ್ಕೆ ಸಿಡಿದ ಮಳೆಯಹನಿಗಳನ್ನು ಒರೆಸಿಕೊಳ್ಳುತ್ತ ತರುಣನು ಆರಾಮಕುರ್ಚಿಯಲ್ಲಿ ಬಿದ್ದುಕೊಳ್ಳುವದು– ಕಾಣುವುದು. ಗಾಳಿಯ "ಸುಂಯ್" ಎಂಬ ಶಬ್ದ. ಅದಕ್ಕೆ ಸೂರಹಿಡಿಯುವವನಂತೆ "ಹುಂ" ಎಂದು ಸಾಲಾಗಿಟ್ಟ ಪುಸ್ತಕಗಳನ್ನು ದಿಟ್ಟಿಸುವನು. ಒಳಗೆ ಯಾರದೊ ಕಾಲಸಪ್ಪಳ. )

**ತರುಣ:—** ( ಕೇಳಿ, ಸಿಟ್ಟಿನಿಂದ ) ಗುರುಸಿದ್ಧಾ, ಏ, ಬಾ ಇಲ್ಲಿ.

**ಗುರುಸಿದ್ಧ:—** ( ಒಳಗಿನಿಂದ ) ಬಂದಿನರಿ, ರಾಮಣ್ಣರಾಯರ. ( ಬರುವನು ).

**ತರುಣ:—** ರಾತ್ರಿ ೮ ಗಂಟೆಯಾದರೂ ದೀಪ ಹಚ್ಚಬಾರದೇನೊ?

**ಗುರುಸಿದ್ಧ:—** ( ಉರಿಯುತ್ತಿರುವ ದೀಪವನ್ನು ನೋಡಿ, ಆಶ್ಚರ್ಯದ ದನಿಯಿಂದ ) ಹಚ್ಚೇತಲ್ಲರಿ ದೀಪ !

**ರಾಮಣ್ಣ:—** ( ಅಣಕಿನಿಂದ ) ಆ ದೀಪ ನಾನು ಹೊತ್ತಿಸಿದೆ. ನೀನು ಹಚ್ಚಿದ ದೀಪಕ್ಕೆ ಬೆಳಕೇ ಇರಲಿಲ್ಲ.

**ಗುರುಸಿದ್ಧ:—** ( ಸುತ್ತಲು ನೋಡಿ ) ಹಂ. . ಗಾಳಿಗೆ ಆರಿರಬೇಕರಿ.

**ರಾಮಣ್ಣ:—** ( ಕೆರಳಿ ) ಗಾಳಿಯ ಪಟದಂತೆ ಮಾತು ಹಾರಿಸ ಬೇಡ.... ಕಿಟಕಿ ಮುಚ್ಚಲಿಕ್ಕೆ ನಿನ್ನ ಕೈ ಮುರಿದಿದ್ದವೇನು ?

**ಗುರುಸಿದ್ಧ:—** ( ಸಂಶಯದಿಂದ ) ಕಿಟಕಿಯೆಲ್ಲ ತೆರದಿಡಬೇಕಂತ ಹೇಳಿದರೀ ಇದೇ—

**ರಾಮಣ್ಣ:—** ( ಗದ್ದರಿಸಿ ) ಯಾರೊ ?

**ಗುರುಸಿದ್ಧ:—** ಈಗ ಒಂದ ಗಂಟೇದ ಹಿಂದ ಕೃಷ್ಣಾತಾಯಿ ಬಂದರ್ರಿ. ಅವರು ಹೇಳಿದರ್ರಿ.

**ರಾಮಣ್ಣ:—** ( ತಿರಸ್ಕಾರದ ನಗೆಯಿಂದ ) ಶುಂಭ! ಕೃಷ್ಣಾತಾಯಿ ಯವರು ನಿನಗೆ ಹೇಳಲಿಲ್ಲ, ನನಗೆ ಹೇಳಿದರು; ಈ ಕಿಟಕಿ ತೆರೆದಿಡು ಅಂತ ಹೇಳಲಿಲ್ಲ, ಆ ಒಳಗೆ ಬಾಣಂತಿಯ ಕೋಣೆಯ ವಿಷಯ ಹೇಳಿದರು.

**ಗುರುಸಿದ್ಧ:—** ನನಗೂ ಹಾಗೇ ಅನಿಸಿತರಿ ಮೊದಲು. ನಿಂತ ಯಿಚಾರಮಾಡತೀನಿ, " ಛೇ, ಹುಚ್ಚಾ, ಬಾಣಂತಿ- ಹಸಿತಾಯಿ- ಅಲ್ಲಿ ಗಾಳಿಬಿಟ್ಟು ಮಾಡೋದೇನೊ ಮಳ್ಳಾ" ಅಂತ ನನ್ನ ನಾನೇ ನಕ್ಕು ಈ ಕಿಟಕಿ ತೆರೆದಬಿಟ್ಟೆ.

**ರಾಮಣ್ಣ:— ಮಾಡುವದಂತೂ ಗೊತ್ತಿಲ್ಲ, ಗೊತ್ತಿಲ್ಲದ್ದನ್ನ ಮಾತಾಡುವೆ.**

**ಗುರುಸಿದ್ಧ:—** ( ನೊಂದುಕೊಂಡು ) ನನಗೆ ಗೊತ್ತಿರಲಿಲ್ಲ ಬಿಡರಿ, ರಾಮಣ್ಣರಾಯರ.

**ರಾಮಣ್ಣ** :— ( ವೃತ್ತಪತ್ರವನ್ನು ತೆಗೆದುಕೊಳ್ಳುತ್ತ ) ನನಗೆ ರಾಮಣ್ಣ ಎಂದಾದರೂ ಕರೆ, ರಾಮರಾಯ ಎಂದಾದರೂ ಕರೆ. ರಾಮಣ್ಣರಾಯ ಎಂದರೇನೊ ?

**ಗುರುಸಿದ್ಧ** :— ಅದೂ ಈ ಕಿಟಕಿಯ ಮಾತಿನ ಹಾಗೆ ಗೊಂದಲ ಆಗೇತರಿ.... ಕಿಟಕಿ ಮುಚ್ಚಲೇನರಿ ?

**ರಾಮಣ್ಣ** :— ಇನ್ನೊಮ್ಮೆಗೆ ಮೊದಲು ಕಿಟಕಿ ಮುಚ್ಚು, ಆ ಮೇಲೆ ದೀಪಹಚ್ಚು.... ಇರಲಿ.

**ಗುರುಸಿದ್ಧ** :— ಎಲ್ಲಿಯದ ಬಂದೈತಿಯೊ ಈ ಪುಸಕಬುದ್ಧಿ ನನಗ. ( ಹೋಗಿ ತಿರುಗಿ ಬಂದು ) ಅಕ! ಅತ್ತೆಯವರು ಒಳಗೆ ಕರದಾರ ನಿಮ್ಮನ್ನ.

( ರಾಮಣ್ಣನು ಅವನನ್ನು ದಿಟ್ಟಿಸಿ ತಲೆತೂಗುವನು. ಗುರುಸಿದ್ಧನು ಹೋಗುವನು. ರಾಮಣ್ಣ ಹಾಗೆಯೆ ವಿಚಾರಮಾಡುತ್ತ ಒಂದೊಂದಾಗಿ ಮೇಜಿನ ಮೇಲೆ ಬಿದ್ದ ಕಡ್ಡಿಗಳನ್ನು ಎಣಿಸುತ್ತ ಕುಳಿತುಕೊಳ್ಳುವನು. ಒಳಗಿನಿಂದ ಕೃಷ್ಣಾತಾಯಿಯು ಬರುವಳು. ಉಟ್ಟದ್ದು ಬಿಳಿದಾದ ಸೀರೆ. ಕಣ್ಣಿಗೆ ಕನ್ನಡಕ. ಹಣೆಗೆ ಕುಂಕುಮ ಬೊಟ್ಟು. ವಯಸ್ಸು ಸುಮಾರು ೨೧ ).

**ರಾಮಣ್ಣ** :— ( ಅವಳನ್ನು ನೋಡಿ ಲಗೆಬಗೆಯಿಂದ ಎದ್ದು ) ಬಂದೆ, ಬಂದೆ—ಏನಾದರೂ ಬೇಕಾಗಿತ್ತೇನೊ !

**ಕೃಷ್ಣಾ** :— ( ನಗೆಯಿಂದ ) ಏನೂ, ಏನೂ ಇಲ್ಲ; ಹೆದರುವ ಕಾರಣವೂ ಇಲ್ಲ.

**ರಾಮಣ್ಣ** :— ಹೆದರಿಕೆ ಅಲ್ಲ.. ಅತ್ತೆ ಕರೆದಳಂತೆ.... ಹೇಗಿದೆ ತಂಗಿಗೆ ?

**ಕೃಷ್ಣಾ** :— ಬಂದು ನೋಡಬಹುದಾಗಿತ್ತು.... ಈ ಹೊತ್ತು ಮುಂಜಾವಿನಿಂದ ಕಾಲನ್ನೆ ಇಟ್ಟಿಲ್ಲವಂತೆ ನೀವು ಆ ಕೋಣೆಯಲ್ಲಿ.

**ರಾಮಣ್ಣ** :— ( ವಿಚಾರಿಸುತ್ತ ) ಆದರೂ ನನ್ನ ಮನಸ್ಸನ್ನು ಅಲ್ಲಿಯೆ ಇಟ್ಟಿರುವೆ. ನನಗೆ ಧೈರ್ಯವಿಲ್ಲ. ನಗೆಯಿಂದ ಬೆಳಗುತ್ತಿರುವ ನನ್ನ ತಂಗಿಯ ಮುಖವು ಕರಾಳವಾಗಿ ಕಪ್ಪಾದುದನ್ನು ನೋಡುವ ಧೈರ್ಯವಿಲ್ಲ ನನಗೆ.. ( ಮುಂದೆ ನಡೆದು ) ಸಂತೋಷದಿಂದ ಸುಸ್ವರವಾಗಿ ಹಾಡಿ ತಣಿಯುತ್ತಿರುವ ಅವಳ ಕೋಮಲಕಂಠವು ಹಲಬಿ ಹಲಬಿ ಯಾತನೆಗಳಿಂದ

ದಣಿಯುತ್ತಿರುವದನ್ನು ನೋಡುವ ಧೈರ್ಯವಿಲ್ಲ.... ಜೀವಕಳೆಯಿಂದ ತುಂಬಿತುಳುಕುತ್ತಿದ್ದ ನನ್ನ ತಂಗಿಯನ್ನು ನೋಡಬೇಕೆಂದರೆ ಜೀವವಿಲ್ಲದ....

**ಕೃಷ್ಣಾ** :— ಸಾಕು. ಅವರ ಜೀವಕ್ಕೆ ಅಂತಹದೇನು ಅಪಾಯ ಬಂದಿದೆ ಈಗ್ಗೆ ?.... ದೇಹ ಅಶಕ್ತವಾಗಿದೆ.... (ಒಂದು ಕುರ್ಚಿಯಲ್ಲಿ ಕುಳಿತು) ನಿಮ್ಮ ಬೀಗರಿಗೆ ಪತ್ರ ಕಳುಹಿಸಲು ಹೇಳಿದರಂತೆ ನಿಮ್ಮ ಅತ್ತೆಯವರು. ಕಳುಹಿಸಿರುವದೇನೊ ಎಂದು ಕೇಳುವವರಿದ್ದರು.

**ರಾಮಣ್ಣ** :— (ತಿರುಗಾಡುತ್ತ ತಿರಸ್ಕಾರದಿಂದ) ಬೀಗನಿಗೆ ಪತ್ರ! ಅವನ ಬುದ್ಧಿಗೆ ಬೀಗ ಹಾಕಿದೆ.

**ಕೃಷ್ಣಾ** :— ಹಾಗಲ್ಲ. ನಾನೇ ಹೇಳಿದ್ದೆ. ಬೇಕಾದ ವಸ್ತು ಕಣ್ಣಿಗೆ ಬಿದ್ದರೆ ಒಮ್ಮೊಮ್ಮೆ ತಪ್ಪಿದ ಸ್ಮೃತಿ ತಿರುಗಿ ಬರುವದು. ಆದಕಾಗಿ—

**ರಾಮಣ್ಣ** :— (ಕನಿಕರದಿಂದ) ಆದರೆ ನಮ್ಮ ತಂಗಿಗೆ ಅವನು ಬೇಕಾದ ವಸ್ತು ಅಲ್ಲ. (ಹುಂ. ಎಂದು ಮುಂದೆ ಏನನ್ನೊ ಹೇಳಬೇಕೆಂದು ತಡೆಯುವನು.)

**ಕೃಷ್ಣಾ** :— (ನಕ್ಕು) ಯಾಕೆ ? ಮತ್ತೆ ಬೀಗತನದ ತಂಟೆ ಹೂಡಿರುವರೇನು ?

**ರಾಮಣ್ಣ** :— (ತಿರುಗಿನಿಂತು) ಬೀಗತನ ಹೂಡಿದ್ದೆ ಜೀವಕ್ಕೆ ತಂಟೆಯಾಗಿದೆ ಇಂತಹರ ಸಹವಾಸದಲ್ಲಿ.. ಹುಂ.. ಮನೆಯ ಮಾತು. ಹೊರಗೆ ಹೇಳಬಾರದೆಂದರೆ, ಇನ್ನು ಮುಚ್ಚಿಡುವ ಹಾಗೂ ಇಲ್ಲ.

**ಕೃಷ್ಣಾ** :— (ಸಂಶಯದಿಂದ) ಮನೆಯ ಮಾತು? ನನಗೆ ಗೊತ್ತಿರ-ಲಿಲ್ಲ... ನಾನು ಸಹಜ ಕೇಳಿದೆ.

**ರಾಮಣ್ಣ** :— (ವಿಚಾರಿಸುತ್ತ) ಇನ್ನೇನು ಮುಚ್ಚಿಡುವ ಮಾತಲ್ಲ.... ನಮಗೆ ಕಳುಹಿಸಿದ ಪತ್ರವನ್ನು ಇಷ್ಟರಲ್ಲಿ ಎಲ್ಲರಿಗೂ ಕಳುಹಿಸಿರಬಹುದು ಅವನು....

**ಕೃಷ್ಣಾ** :— (ಸಂಶಯದಿಂದ) ಎಲ್ಲರಿಗೂ ಕಳುಹಿಸುವ ಪತ್ರ ?

**ರಾಮಣ್ಣ** :— (ತಡೆದ ಸಿಟ್ಟಿನಿಂದ ತಲೆತೂಗಿ) ಅವನ ಎರಡನೆಯ ಮದಿವೆಯ ಪತ್ರ !

**ಕೃಷ್ಣಾ :—** ( ಚಕಿತಳಾಗಿ ) ಏನು ?

**ರಾಮಣ್ಣ :—** ( ನಿಂತು ) ಮತ್ತೇನು ? ಎರಡನೆಯ ಮದಿವೆ· ಮೊದಲಿನ ಹೆಂಡತಿಯಿಂದ ಸುಖವಿಲ್ಲವಂತೆ ! ಸಂಸಾರಕ್ಕೆ ಅನಾನುಕೂಲತೆ-ಯಾಗಿದೆಯಂತೆ ! ವರ್ಷಕ್ಕೊಮ್ಮೆ ಮಗುವಿನ ತಾಯಿಯಾಗುವ ಸೊಸೆ-ಯಿಂದ ಮನೆಗೆ ಏನು ಅನುಕೂಲ ಎಂದು ಅವನ ಮಾತೃದೇವತೆಯ ಆಶೀರ್ವಾದವಂತೆ !.... ಮುಂಜಾವಿನಿಂದ ನನ್ನ ತಲೆ ತುಂಬಿದೆ. ಯಾರಿಗೂ ಹೇಳಿಲ್ಲ ಇದುವರೆಗೆ.. ಈ ಯಾತನೆಯಿಂದ ಪಾರಾಗುವದಕ್ಕೆ ಒಮ್ಮೊಮ್ಮೆ ನಮ್ಮ ತಂಗಿಯು ಸತ್ತುಹೋಗಬಾರದೆ ಎಂದು—

**ಕೃಷ್ಣಾ :—** ( ನಡುವೆಯೆ ) ಸಾಕು ! ಯಾರ ತಪ್ಪಿಗೆ ಯಾರು ಸಾಯುವದು ?

**ರಾಮಣ್ಣ :—** ( ಕಿಚ್ಚಿನ ನಗೆಯಿಂದ ) ನಾನೂ ಅದನ್ನೆ ಕೇಳುವೆ. ತಪ್ಪು ಯಾರದು ? ವರ್ಷಕ್ಕೊಂದು ಮಗು ಎಂಪರೆ ತೊಂದರೆ ಎಂದು ಬೀಗನು ನನ್ನ ತಂಗಿಯನ್ನು ಬಿಡುವನು. ಬೆಳೆಸುವ ಶಕ್ತಿ ಇಲ್ಲದವರಿಗೆ ಮಕ್ಕಳೇ ಬೇಡವೆಂಬ ತತ್ವದ ಹಟವನ್ನು ನಾನು ಹೇಳುತ್ತಿರುವೆ. ತಪ್ಪು ಯಾರದು ? ಮಕ್ಕಳೇ ಆಗಲಿಲ್ಲವೆಂದು ನನ್ನ ಸೋದರತ್ತೆಯ ಗಂಡನು ಅವಳನ್ನು ಬಿಟ್ಟುಕೊಟ್ಟನು.. ತಪ್ಪು ಯಾರದು ? ·ಕೇಳಿದಾಗೊಮ್ಮೆ ಅದಕ್ಕೆ ಉತ್ತರಕೊಡುವ ಧೈರ್ಯವಿಲ್ಲದ್ದಕ್ಕೆ ನನ್ನಲ್ಲಿ ನಾನೇ ಕೋಪಿಸಿ-ಕೊಳ್ಳುವೆ.... ಒಳಗೆ ಹೋಗಿ ನನ್ನ ತಂಗಿಯ ಮುಖವನ್ನು ಹೇಗೆ ನೋಡಲಿ? ಅನಂತಯಾತನೆಗಳನ್ನು ಭೋಗಿಸುವ ನನ್ನ ತಂಗಿಯ ಪ್ರೇತಪ್ರಾಯವಾದ ಮುಖವು “ ತಪ್ಪು ಯಾರದು ” ಎಂದು ಕೇಳಿದರೆ ಏನು ಹೇಳಲಿ ? ಅವಳಿಗೆ ಸ್ಮೃತಿಯಿಲ್ಲ.. ಇಲ್ಲವಾದರೆ ನನ್ನ “ ನನ್ನ ಮದಿವೆ ಮಾಡುವಾಗ್ಗೆ ನೀನು ಉತ್ಸವದಿಂದಿದ್ದೆ. ಅದು ನನ್ನ ಸ್ಮರಣೆಯಲ್ಲಿದೆ ” ಎಂದು ಕೇಳಿದರೆ ಏನು ಹೇಳುತ್ತಿದ್ದೆ ? ಅವಳ ಸ್ಮೃತಿ ತಪ್ಪಿದೆ. ಹುಂ.. ಅದೂ ಒಂದು ಸಮಾಧಾನವೆ.. ಸ್ಮೃತಿ ಬಂದ ಮೇಲೆ ನಮ್ಮೆಲ್ಲರ ಕ್ರೂರತನವೆ ಮೂರ್ತಿ ತಾಳಿದಂತಿದ್ದ ಆ ವಿಕಾರಸ್ವರೂಪದ ಕೂಸನ್ನು ನೋಡಿದಳೆಂದರೆ—

**ಕೃಷ್ಣಾ :—** ( ಮಾತು ತಪ್ಪಿಸುವ ಹಂಚಿಕೆಯಿಂದ ) ಆ ಕೂಸು ಹೋಗಿ ತಾಯಿ ಬದುಕಲಿ· ಎಲ್ಲರಿಗೂ ಆನಂದ.

**ರಾಮಣ್ಣ** :— ಹಾಗಿದ್ದರೆ ಆ ಕೂಸೇ ಬದುಕುವದು. ತಾಯಿ ಮಾತ್ರ—

**ಕೃಷ್ಣಾ** :— ( ತಡೆದು ) ಸಾಕು. ಒಬ್ಬರೇ ಕುಳಿತು ಸುಮ್ಮಸುಮ್ಮನೆ ಕೆಟ್ಟವಿಚಾರ ತಂದುಕೊಂಡು ಯಾಕೆ ಕಷ್ಟಬಡುವಿರಿ ?.... ನೀವೂ ನಿಮ್ಮ ತಂದೆಯು ಕೂಡ ಸಭೆಗೆ ಹೋಗಬೇಕಾಗಿತ್ತು.

**ರಾಮಣ್ಣ** :— ( ತಿರಸ್ಕಾರದಿಂದ ) ಸಭೆಗೆ ಹೋದರೇನು ? ಅಲ್ಲಿ ನನ್ನ ತಂದೆಯೆ ಮಾತನಾಡುವರು. ವಿಷಯ –" ಸಂತಾನಸಂಯಮ ;" ಮನೆಯಲ್ಲಿ ವಿಚಾರಸಂಯಮ ( ತಿರುಗಾಡುತ್ತ ) ಛಿ, ನನಗಂತೂ ಬೇಜಾರಾ-ಗಿದೆ.. ( ಒಮ್ಮೆಲೆ ನಿಂತು ಸಮಾಧಾನದಿಂದ ) ಸರಿಯಾದ ವಿಚಾರವೊಂದು ಈ ಹೊತ್ತು ತೋಚಿತು. ಒಬ್ಬನೆ ನಿಂತುಕೊಂಡು ಸೂರ್ಯನು ಮುಳು-ಗುವದನ್ನು ನೋಡುತ್ತಿದ್ದೆ. ಪೂರ್ವದ ಮೂಲೆಯಿಂದ ಮೋಡಗಳು ಒಂ-ದೊಂದಾಗಿ ತಲೆಯೆತ್ತುತ್ತಿವೆ.. " ಪೂರ್ವವಯಸ್ಸು ಎಂದರೆ ಪೂರ್ವದಿಕ್ಕು; ಅಲ್ಲಿ ಸೂರ್ಯನಂತಹ ಶಕ್ತಿಯನ್ನು ಮೂಡಿಸಬೇಕು " ಎಂದು ಆಡಂಬರದಿಂದ ಯುವಕರ ಸಭೆಯಲ್ಲಿ ನಾನು ಹರಟೆ ಕೊಚ್ಚುತ್ತಿರುವದು ಸ್ಮರಣೆಗೆ ಬಂದಿತು.. ಆದರೆ ಒಂದರ ಮೇಲೊಂದು ಮೋಡಗಳು ದೂಡುತ್ತಿರುವ ಈ ಸಂಜೆಯಲ್ಲಿಯ ಪೂರ್ವದಿಕ್ಕು ನಾನು ಎಂದು ತೋಚಿತು ನನಗೆ.... ಎದುರು ಪಶ್ಚಿಮದಲ್ಲಿ ಕಾಣುವ ಸೂರ್ಯನೆಂದರೆ ನಮ್ಮಲ್ಲಿಯ ಹೆಂಗಸು ಎಂದು ತೋಚಿತು ನನಗೆ. ಮೂಡುವಾಗ ಕೆಂಪು, ಮುಳುಗುವಾಗ ಕೆಂಪು ಸೂರ್ಯ. ಹುಡುಗೆಯಾಗಿ ಹುಟ್ಟುವಾಗ ಮುದ್ದು ಮುಖ, ತಾಯಿ-ಯಾಗಿ ಸಾಯುವಾಗ ಮಮತೆಯ ಮುಖ. ಎಲ್ಲರೂ ನೋಡುವರು, ಎಲ್ಲರಿಗೂ ಆನಂದ. ಸೂರ್ಯನಂತೆ ದಿನಾಲು ಹುಟ್ಟನಿಂದ ಸಾಯುವವರೆಗೆ ದುಡಿಯುವದು, ದುಡಿಯುವದು ! ದುಡಿದ ದಣಿವಿನಿಂದ ಕಾಯ್ದ ಹೆಂಗಸನ್ನು ಮಧ್ಯಾಹ್ನದ ಸೂರ್ಯನಂತೆ ಯಾರೂ ನೋಡುವದಿಲ್ಲ.. ಅದೊ.. ನನಗೆ ಹುಚ್ಚನೆನ್ನ ಬೇಡಿ.. ಈ ಹೊತ್ತು ಸೂರ್ಯನು ಮುಳು-ಗುವಾಗ ಮೋಡಗಳಿಂದ ಕಪ್ಪು ಕತ್ತಲೆಯಾದ ಪೂರ್ವದಿಕ್ಕನ್ನು ನೋಡಿ ಹೆಂಗಸು ಸಾಯುವಾಗ ತತ್ಪದ ಕತ್ತಲೆಯಿಂದ ತುಂಬಿದ ತವರುಮನೆ ಎಂದು—

ಕೃಷ್ಣಾ:— (ಗಟ್ಟಿಯಾಗಿ ನಕ್ಕು) ನೀವು ಬರೆದ ಗ್ರಂಥಗಳನ್ನೆಲ್ಲ ಓದಿರುವೆ.. ಈಗ್ಗೆ ಮಾತ್ರ ಹಣ್ಣಾನ್ನು ಗಿಡದಲ್ಲಿಯೆ ನೋಡಿದೆ.

ರಾಮಣ್ಣ:— (ಅಸಮಾಧಾನದಿಂದ) ಅಹುದು.. ನನ್ನ ಆಯುಷ್ಯದಲ್ಲಿ ಅದೊಂದು ಪ್ರಮಾದವಾಗಿದೆ ಗ್ರಂಥಗಳನ್ನು ಬರೆದೆ. ಅದಕಾಗಿ ನಾನು ಹೇಳುವದರಲ್ಲಿ ಯಾರದೂ ವಿಶ್ವಾಸವಿಲ್ಲ.

ಕೃಷ್ಣಾ:— (ನಿಲುತ್ತ) ನಾನು ಹಾಗೆ ಹೇಳಲಿಲ್ಲ ಕಲ್ಪನಾ ಬೆಳೆಸಿ ಕಷ್ಟಬಡುವದು ಯಾಕೆ ?.... (ಎದ್ದು) ಮಳೆ ನಿಂತಿದೆಯೊ ಇಲ್ಲವೊ? ಇಂತಹ ಹವೆಯೊಳಗೆ ಒಬ್ಬನೇ ಕುಳಿತುಕೊಂಡರೆ ಕೆಟ್ಟ ವಿಚಾರಗಳೆ ತುಂಬುವವು ತಲೆಯಲ್ಲಿ.. ಮನೆಗೆ ಹೋಗಿ ಔಷಧ ಕಳುಹಿಸುವ ವ್ಯವಸ್ಥೆ ಮಾಡುವೆ. ಸದ್ಯಕ್ಕೆ ನೀವು ಯಾವ ವಿಚಾರವನ್ನು ಮಾಡಬೇಡಿರಿ .... ತಾಯಿ-ಮಗು ಇಬ್ಬರ ಜೀವಕ್ಕೂ ಅಪಾಯದ ಹೆದರಿಕೆ ಇಲ್ಲ.

ರಾಮಣ್ಣ:— (ಕೈಚಲ್ಲಿ) ಮಗು ಯಾರಿಗೆ ಬೇಕಾಗಿದೆ ?

ಕೃಷ್ಣಾ:— (ಮುಂದೆ ಬಂದು) ಕಷ್ಟದಿಂದ ಕಂಗಾಲಾದ ತಾಯಿಗೆ ಬೇಕಾಗಿದೆ.. ಇದನ್ನೆ ಹೇಳಿ ಹೋಗಬೇಕು ಎಂದಿದ್ದೆ.... ಪ್ರಾಮಾಣಿಕ ತನದಿಂದ ದುಡಿದು ಬರೆದ ನಿಮ್ಮ ಗ್ರಂಥ ಜನರಿಗೆ ಬೇಕಾಗಿಲ್ಲ— ಆದರೂ ನಿಮಗೆ ಬೇಕೆ ಅಲ್ಲವೆ? .. ಸದ್ಯಕ್ಕೆ ಮಗುವಿನ ವಿಷಯ ಯಾವ ಮಾತೂ ಬೇಡ. ದುಡಿದು ದುಡ್ಡುಗಳಿಸುವ ತಂದೆಗೆ, ಆಳಿನಂತೆ ದುಡಿಸಿಕೊಳ್ಳುವ ಸಂಸಾರಿಗರಿಗೆ ಬೇಕಾಗಲಿಕ್ಕಿಲ್ಲ ಮಕ್ಕಳು ಒಂದುವೇಳೆ. ಆದರೆ ದುಡಿದು ದುಡಿದು ಮನೆಯಲ್ಲಿ ಕೊಳೆಯುವ ಹೆಂಗಸಿಗೆ ಮಕ್ಕಳೇ ಆಟದ ವಸ್ತು.... ಏನೆ ಇರಲಿ, ಸದ್ಯಕ್ಕೆ ಈ ಮನೆ ನೋಡಿಕೊಳ್ಳುವವರು ನಿಮ್ಮ ಸೋದರತ್ತೆ · ಅವರ ಮನಸ್ಸನ್ನು ನೋಯಿಸಬೇಡಿರಿ. ಮನೆಯಲ್ಲಿ ಮಗು ಹುಟ್ಟಿದೆ ಎಂದು ಅವರಿಗೊಂದು ಉತ್ಸವವಾಗಿದೆ.

ರಾಮಣ್ಣ:— (ಹತಾಶನಂತೆ) ಆಗಲಿ, ಆಗಲಿ, ನನ್ನದೇನು ಸಂಬಂಧ? ಈ ಮನೆಗೆ ನನ್ನ ತಂದೆ ಹಿರಿಯರು.

ಕೃಷ್ಣಾ:— (ಮೆಲುದನಿಯಲ್ಲಿ) ಅವರು ಹಿರಿಯರೆಂಬುದೆ ನನ್ನ ಹೆದರಿಕೆ. ಹಿರಿತನದಿಂದ ಮನೆಯಲ್ಲಿಯೇ "ಸಂತಾನಸಂಯಮ"ದ

ವ್ಯಾಖ್ಯಾನ ಕೊಟ್ಟಾರು. ಸದ್ಯಕ್ಕೆ ಅದು ಬೇಡ ಎಂದು ಹೇಳಿದೆ.. (ಮುಂದೆನಡೆದು) ಇದು ಒಂದು ಔಷಧ.. ನಿಮ್ಮ ತಂಗಿಯ ಜೀವಕ್ಕೆ ಔಷಧ.

**ರಾಮಣ್ಣ**:— (ಕನಿಕರದಿಂದ) ನನಗೆ ಗೊತ್ತಿದೆ. ಮಾಡಬಾರದ ಕೆಲಸವನ್ನೆಲ್ಲ ನಮ್ಮ ಕಡೆಯಿಂದ ಮಾಡಿಸುವದಕ್ಕೆ ನಮ್ಮ ತಂಗಿಯು ನೆವ.. ನಿಮಗೆ ದೋಷ ಕೊಡುವದಿಲ್ಲ.. ನನ್ನ ಮಾತು ಹೇಳಿದೆ.. ನನಗೆ ಸದ್ಯಕ್ಕೆ ತಂಗಿಯ ಜೀವ ಉಳಿಯಬೇಕಾಗಿದೆ. ಅದಕಾಗಿ ಸಭೆಯನ್ನು ಬಿಟ್ಟೆ, ತತ್ವ ಬಿಟ್ಟೆ. ತಲೆಹಿಡಿದುಕೊಂಡು ಮನೆಯಲ್ಲಿ ಕುಳಿತುಕೊಂಡೆ. ನನಗೆ ಗೊತ್ತಿದೆ ಇದೊಂದು ಹೇಡಿತನ ಎಂದು.

**ಕೃಷ್ಣಾ**:— ಮತ್ತೆ ಕಲ್ಪನೆ.

**ರಾಮಣ್ಣ**:— ಅಲ್ಲ, ಕಲ್ಪನೆಯಲ್ಲ. ನನ್ನ ತತ್ವಕ್ಕಾಗಿ ನಾನು ಸಭೆಗೆ ಹೋಗಬೇಕಾಗಿತ್ತು. ಆದರೆ ಹೊಟ್ಟೆಯಲ್ಲಿ ಸಿಟ್ಟನ್ನಿಟ್ಟು ಬಾಯಿಯಿಂದ ನಗುವ ಧೈರ್ಯವಿಲ್ಲ ನನಗೆ. ನಮ್ಮ ತಂದೆಗೆ ಅನುಭವ ಹೆಚ್ಚು, ಆದ್ದರಿಂದ ಸಮಾಧಾನ ಸುಲಭ.

**ಕೃಷ್ಣಾ**:— (ಎಡಬಾಗಿಲಿನ ಹತ್ತಿರ ನಿಂತು) ಮಲಗುವಾಗ ತಣ್ಣೀರು ಸ್ನಾನಮಾಡಿರಿ.. ಇದೂ ಒಂದು ಔಷಧ. (ಹೊರಡುವಳು.)

**ರಾಮಣ್ಣ**:— ಗುರುಸಿದ್ಧಾ. (ಆಳು ಬರುವನು.) ಒಂದು ಲಾಂದರು ತೆಗೆದುಕೊಂಡು ಇವರನ್ನು ಮನೆಗೆ ಮುಟ್ಟಿಸು. (ಆಳು ಒಳಗೆ ಹೋಗುವನು). ಹುಂ. ಈ ಹೊತ್ತು ಬೇನೆಯಲ್ಲಿ ಹೊಸ ತೊಡಕು ಸೇರಿಲ್ಲವಷ್ಟೆ? ನಾನಿನ್ನೂ ನೋಡಿಲ್ಲ.

**ಕೃಷ್ಣಾ**:— ತೊಡಕು ಎಂದು ಹೇಳುವಂತಿಲ್ಲ. ಸ್ಮೃತಿಯ ಭ್ರಂಶ ಮಾತ್ರ ಇರಬಹುದು.. ಮುಂಜಾವಿನಿಂದ ಒಂದೇಸವನೆ ಒಂದರಿಂದ ಐದರ ವರೆಗೆ ಅಂಕಿಗಳನ್ನು ಮತ್ತೆ ಮತ್ತೆ ಎಣಿಸುತ್ತ ಕುಳಿತಿರುವರು.

**ರಾಮಣ್ಣ**:— (ನಕ್ಕು) ಅದು ನಮ್ಮ ಮನೆತನದಲ್ಲಿ ನಡೆದು ಬಂದಂತೆ ಕಾಣುವದು. ಇದೊ.... ನಾನೂ ಈ ಐದು ಕಡ್ಡಿಗಳನ್ನು ಮತ್ತೆ ಮತ್ತೆ ಎಣಿಸುತ್ತಿದ್ದೆ ನೀವು ಬರುವದಕ್ಕೆ ಮುಂಚಿತ.

**ಕೃಷ್ಣಾ:**— ಅದಕಾಗಿಯೆ ನಿಮಗೂ ಔಷಧ ಹೇಳಿದೆ.

(ಒಂದು ಕಯ್ಯಲ್ಲಿ ಬಡಿಗೆ ಇನ್ನೊಂದು ಕಯ್ಯಲ್ಲಿ ಲಾಂದರ ಹಿಡಿದು ಆಳು ಬರುವನು.)

**ರಾಮಣ್ಣ:**— (ಅವನನ್ನು ನೋಡಿ) ಶುಂಭ! ಬಡಿಗೆ ಯಾತಕ್ಕೆ? ಕೊಡೆ ತೆಗೆದುಕೊಂಡು ಬಾ.

**ಗುರುಸಿದ್ಧ:**—ಮಳೆ ಇಲ್ಲರಿ ಈಗ. ಕೆಳಗ ತುಂಬಿ ನೀರು ಹರೀತೈತಿ. ಮತ್ತ ಕಾಲತಪ್ಪಿ—

**ರಾಮಣ್ಣ:**— ಹುಂ- ಇರಲಿ ನಡೆ.

**ಗುರುಸಿದ್ಧ:**— (ಬಾಗಿಲು ತೆರೆಯುತ್ತ) ಹೌದಲ್ಲೊ ಹೇಳರಿ. ರಸ್ತೆ ತಪ್ಪಿ ಗಟಾರದೊಳಗ—

**ರಾಮಣ್ಣ:**— (ಕೆರಳಿ) ಇರಲಿ ಹೋಗೊ.

**ಕೃಷ್ಣಾ:**— ಮತ್ತೆ ಮುಂಜಾವಿನಲ್ಲಿ ಬಂದು ಹೋಗುವೆ. (ಹೋಗುವಳು).

**ಗುರುಸಿದ್ಧ:**— ಮತ್ತ ಹೆಣ್ಣಮಕ್ಕಳ ಕೆಲಸ, ಅದಕ್ಕ—

**ರಾಮಣ್ಣ:**— (ಗದ್ದರಿಸಿ) ಹೋಗೊ ಬಾಗಿಲು ಮುಚ್ಚಿಕೊಂಡು.

(ಬಾಗಿಲು ಮುಚ್ಚಿಕೊಂಡು ಆಳು ಹೋದಮೇಲೆ ಮತ್ತೆ ಆರಾಮಕುರ್ಚಿಯಲ್ಲಿ ಕುಳಿತುಕೊಳ್ಳುವನು. ಮತ್ತೆ ಕಡ್ಡಿಗಳನ್ನು ಎಣಿಸುವನು. ಒಮ್ಮೆಲೆ ಲಕ್ಷ್ಯಕ್ಕೆ ಬಂದು ಮುಗುಳುನಗೆಯಿಂದ ತಡೆಯುವನು. ಸುಂದರಮ್ಮನು ಬರುವಳು.)

**ಸುಂದರಮ್ಮ:**— ಗುರುಸಿದ್ಧ ಎಲ್ಲಿ ಹೋದನೊ ಲಾಂದರು ತೆಗೆದುಕೊಂಡು?

**ರಾಮಣ್ಣ:**— ಬರುವ ಈಗ ಕೃಷ್ಣಾತಾಯಿಯನ್ನು ಮನೆಮುಟ್ಟಿಸಿ.

**ಸುಂದರಮ್ಮ:**— ಅಯ್ಯ! ಮರೆತೇ ಬಿಟ್ಟೆ ನೋಡು, ಮುಂಜಾನೆ-ಯಿಂದ ಕೂಸಿಗೆ ಕೆಮ್ಮು ಬಂದಿದೆ. "ಸುಂದರಮ್ಮಾ, ನಿಮ್ಮ ಮರಿವಿಗೆ ಒಂದು ಔಷಧ ಬೇಕು" ಅಂತ ನಕ್ಕಳು ಆ ಪ್ರಾಣಿ. "ಮುದುಕಿ ಆದೆ, ನನಗೆ ಯಾಕೆ ಔಷಧ, ಕೃಷ್ಣಾತಾಯಿ" ಅಂತ ಹೇಳಿದೆ. ಅದೆಲ್ಲ ನೆನಪು

ಇವೆ. ಕೂಸಿಗೆ ಔಷಧ ಹೇಳುವದೇ ಮರೆತು ಬಿಟ್ಟೆತು.... ಹೇಳಿಯಾದರೂ ಕಳಿಸುವೆ ಏನೊ?

**ರಾಮಣ್ಣ :—** ನಾಳೆ ಬರುವಳಲ್ಲ ಮತ್ತೆ. ಕೂಸಿನದೇನು ಅಂತಹ ಹೆದರಿಕೆ? ಮೊದಲು ತಾಯಿಯ ಜೀವ ಕಾಯುವದು ದೊಡ್ಡಮಾತು.

**ಸುಂದರಮ್ಮ :—** (ನೊಂದುಕೊಂಡು) ಇದೇನೊ? "ಸುಂದರಮ್ಮಾ, ಸದ್ಯೇಕ ನೀವೇ ಕೂಸಿನ ತಾಯಿ'' ಅಂತ ಕೃಷ್ಣಾತಾಯಿ ಅಂದಕೂಡಲೆ ನನಗಂತೂ ಕಣ್ಣುತುಂಬ ನೀರು ಬಂದಿತು. "ಕೂಸಿನದೂ ಒಂದು ಜೀವ" ಅಂತ ಹೇಳಿದೆ.

**ರಾಮಣ್ಣ :—** ಹಾಗಲ್ಲ ನಾನು ಹೇಳಿದ್ದು. ತಾಯಿಗೆ ಕ್ಷೇಮವಾದರೆ ಕೂಸಿಗೂ ಕ್ಷೇಮ.

**ಸುಂದರಮ್ಮ :—** "ಆದರೂ ಎಳೆಯ ಜೀವ. ತಾಯಿಯಕಿಂತ ಹೆಚ್ಚಿನವರು ಯಾರು?'' ಅಂತ ಹೇಳಿದೆ. "ನಿಮ್ಮ ಅಣ್ಣಂದಿರ ಮಕ್ಕಳನ್ನು ಬೆಳೆಸಿದ ತಾಯಿ ನೀವೇ ಅಲ್ಲೇ?" ಎಂದು ಕೇಳಿದರು. "ಅಹುದಕ್ಕಾ, ಏನೊ ನನ್ನ ಕೈಗುಣ" ಅಂದೆ. ನನಗಂತೂ ಪ್ರೈ ಜುಮ್ಮೆನ್ನುವದು. ದೇವರೆ, ಐದು ಕೂಸು ಕಳೆದುಕೊಂಡಳು ಇದೊಂದಾ-ದರೂ ಉಳಿಯಬಾರದೆ? "ಎಂಟು-ಮಕ್ಕಳ ತಾಯಿ-ಮುತ್ತೈದೆಯ ಉಡಿತುಂಬುವೆ" ಅಂತ ಬೇಡಿಕೊಂಡೆ.

**ರಾಮಣ್ಣ :—** (ನಕ್ಕು) ಈಗೇನಾಗಿದೆ ಇಷ್ಟು ಹೆದರಲಿಕ್ಕೆ?

**ಸುಂದರಮ್ಮ :—** (ಕಣ್ಣೀರು ಒರಸಿಕೊಂಡು) ಏನಿಲ್ಲ. ಆದರೂ ನೋಡಿ ನನ್ನದೇ ಕೆಟ್ಟ ಯಿಚಾರ. ಮಕ್ಕಳು—ಮೊಮ್ಮಕ್ಕಳು ಸುಖದಿಂದಿ-ರೋದು ಕಣ್ಣಾರೆ ನೋಡುವ ದೈವ ನನಗೆಲ್ಲಿಯದು ಅಂತ ನಮ್ಮದೇನು? ಬೇಡಿಬಂದಿಲ್ಲ ಆಯುಸ್ಸೂ ಆಯಿತು. ನಿನ್ನ ತಂಗಿ ಸಣ್ಣಾಕೆ; ಇಷ್ಟರಲ್ಲಿಯೆ ಐದುಮಕ್ಕಳನ್ನು ಕಳೆದುಕೊಂಡಳು. ನೀನು-ಸಣ್ಣಾತ; ಸಂಸಾರ ಬಿಟ್ಟು ಕುಳಿತಿ. ಮನೆ ಅಂದರ ರಣರಣ ಆಗಿಹೋಗೇದ. ಪಾಪ! ನಿಮ್ಮಪ್ಪ ನಂತೂ ಮನೆಯೊಳಗೆ ಇರೋದೇ ಇಲ್ಲ. ಆ ಸಭಾ, ಈ ಸಭಾ ಅಂತ ಹೋಗಿ ಬಿಡ್ತಾನ. ಉಶ್.. ದೇವರೆ, ಯಾರಿಗೆ ತಿಳಿದಿತ್ತು ಇದೆಲ್ಲ? ಮನೆ ಅಂದರೆ ಮಕ್ಕಳಿಂದ ಉಕ್ಕಿ ಉಕ್ಕಿ ನಗತಿತ್ತು.

**ರಾಮಣ್ಣ** :— ( ನಗೆಯಿಂದ ) ಇಲ್ಲದ್ದು ಕಲ್ಪನಾ ಮಾಡಿ ನೀನು ಬಿಕ್ಕಿ ಬಿಕ್ಕಿ ಅಳುವೆ ?

**ಸುಂದರಮ್ಮ** :— ( ಕನಿಕರದಿಂದ ) ಇಲ್ಲದ್ದೇನೊ, ರಾಮೂ, ಇದು? ನನಗಂತೂ ಇನ್ನೂ ಕಣ್ಣು ಕಟ್ಟಿದೆ ೫-೬ ನೀವು ಅಣ್ಣ-ತಮ್ಮಂದಿರು, ೩-೪ ಅಕ್ಕತಂಗಿಯರು. ಮನೆ ತುಂಬಿದ ಮಾತು ಕೇಳಿಸತಿದ್ದಿಲ್ಲ. ಬೇಡಿ-ಬಂದಿದ್ದಳು ನಿಮ್ಮ ತಾಯಿ. ಪುಣ್ಯಾತ್ಮಳು; ಮಕ್ಕಳನ್ನ ಹಡೆದು ಮುತ್ತೈದೆ ಸಾವು ಕಂಡಳು. ನಮ್ಮ ಹಣೆಬಲ್ಲಿಯೆ ಬರೆದಿತ್ತು, ಇದ್ದದ್ದೆಲ್ಲ ಬಳಿದು ಹೋದದ್ದು ನೋಡೋದು. ಏನೊ, ನೀನಾದರೂ ಮದಿವೆ ಮಾಡಿಕೊಂಡು—

**ರಾಮಣ್ಣ** :— ಯಾಕೆ, ಅತ್ತೆ, ನನ್ನ ಮದಿವೆಯಾದದ್ದು ಮರೆತೆ-ಯೇನು ?

**ಸುಂದರಮ್ಮ**:— ( ತಿರಸ್ಕಾರದಿಂದ ) ಅದೇನು ಮದಿವೆಯೊ ? ಮರೆ ತರೆ ಸರಿ. ನಾನು ಆವಾಗಲೆ ಬೇಡ, ಬೇಡ ಅಂತ ಹೇಳಿದೆ. ಈಗ ಹೇಳತಾರ ಎಲ್ಲರೂ ನನಗ " ಸುಂದರಮ್ಮಾ, ದೇವರ ಮಾತು ನುಡಿದಿರಿ ಆಗ ನೀವು. ಆ ಹುಡುಗೆಯ ಮೈಯ್ಯೊಳಗ ದೆವ್ವ ಸೇರಿದೆ ಅಂತೆ" ನನಗ ಹೇಳತಾರೆ. " ಈಗಾವರೂ ನನ್ನ ಮಾತು ಕೇಳಲಿ'' ಅಂದೆ. "ಇನ್ನೇನು ? ಹುಡುಗೆಯನ್ನ ತಿರುಗಿ ಕರೆದುಕೊಳ್ಳೋದೂ ನಿಂತುಹೋಯಿತಲ್ಲ" ಅಂದರು. "ನಾವೇನು ಕಾಣದವರಲ್ಲ. ಹುಡುಗೆಯನ್ನ ಎಂದಿಗೂ ತಿರುಗಿ ಕರೆಯೋದಿಲ್ಲ ಅಂತ ಹೆಂಡತಿ ಸಾಯುವಾಗ ಆಣೆ ಇಟ್ಟಾನ ನಮ್ಮಣ್ಣ" ಅಂತ ಥಟ್ಟನೆ ಅವರ ಮೋರೆಯ ಮೇಲೆ ಹೇಳಿಬಿಟ್ಟೆ. ( ಮೇಲಿನ ಮಾತು ನಡೆದಾಗಲೆಲ್ಲ ರಾಮಣ್ಣನು ಸಾವಕಾಶವಾಗಿ ವೃತ್ತಪತ್ರದ ಹಿಂದೆ ಮುಖಮಾಡಿಕೊಳ್ಳುವನು. ಸುಂದರಮ್ಮನ ಲಕ್ಷ್ಯವಿಲ್ಲ ). ಇಂತಹಾ ಕಾಗೆ-ಮನಸ್ಸಿನವರ ಕೂಡ ಯಾರು ನೆಂಟತನ ಮಾಡುವರಮ್ಮಾ ! ದುಡ್ಡಿಲ್ಲ, ದುಗ್ಗಾಣಿಲ್ಲ. ಹುಡುಗೆಯ ಮೈ ಮೇಲೆ ಆಭರಣ ಅಂದರೆ ಆಕೆಯ ಕಣ್ಣೊಳಗಿನ ಹುವ್ವು ಒಂದೇ ! ಕಾಗೆಯ ಕಣ್ಣು !

**ರಾಮಣ್ಣ** :— ಈ ಹತ್ತು ವರುಷಗಳೊಳಗೆ ಆ ಹುವ್ವು ಹಣ್ಣಾಗಿರ-ಬಹುದಲ್ಲವೆ ? ( ನಗುವನು ).

**ಸುಂದರಮ್ಮ**:— ಸಾಕು, ನಗುವೆಯೇನು? ಬೆಳೆದ ಗಂಡಸ ಮಗ— ಮದಿವೆ ಆಗಿ, ಮಕ್ಕಳೊಂದಿಗ ಆಗಿ, ಸಂಸಾರ ಮಾಡೋದು ಬಿಟ್ಟು.

**ರಾಮಣ್ಣ**:— ನೀನು ಇರುವವರೆಗೆಯೂ ನಾನು ಕೂಸು ಆಗಿಯೆ ಉಳಿಯುವೆ.

**ಸುಂದರಮ್ಮ**:— ನಿಮ್ಮಪ್ಪನೂ ಹಾಗೆಯೆ. ಮಗನ ಮದಿವೆ ಮಾಡೋದು ಬಿಟ್ಟು ಮುಂದಿಗೆಲ್ಲ ಮಕ್ಕಳು ಬೇಡ ಅಂತ ಹೇಳತಾ ತಿರುಗುವ.

**ರಾಮಣ್ಣ**:— ನಮ್ಮಂತಹ ಮಕ್ಕಳನ್ನು ಹಡೆದು ಪಶ್ಚಾತ್ತಾಪ ಆಗಿದೆ ಅವನಿಗೆ.

**ಸುಂದರಮ್ಮ**:— ಏನಾಗಿದೆಯೊ ಏನೊ?.. ಒಂದರ ಪರಿವೆ ಇಲ್ಲ ಅವನಿಗೆ· ರಪರಪ ಮಳೆ ಹೊರಗೆ.. ಏನು ಅಂತಹಾ ಕೆಲಸವೊ ಅವನದು! ತನ್ನ ಪರಿವೆ ಕೂಡ ತನಗಿಲ್ಲ.

**ರಾಮಣ್ಣ**:— (ಎದ್ದು) ಏನೂ ಹೆದರಬೇಡ. ನೂರು ವರ್ಷ ಆಯುಷ್ಯ ನಿಮ್ಮಣ್ಣನಿಗೆ.

(ಹೊರಗೆ. "ಒಂದು ಹೇಳಿರಿ ನನಗೆ")

**ರಾಮಣ್ಣ**:— ಅದೊ! ಆ ನಾಲ್ಕನೆಯ ಹೆಂಡತಿಯ ಗಂಡನೂ ಬಂದ!

**ಸುಂದರಮ್ಮ**:— ಯಾರೂ?

**ರಾಮಣ್ಣ**— ಗೋಪಾಲಕೃಷ್ಣ—ಅಲ್ಲಲ್ಲ— ಗೋಪಾಲಾಚಾರ್ಯ.

**ಸುಂದರಮ್ಮ**:— ಅವನನ್ನೇನು ಹಂಗಿಸುವೆ? ಸಂಸಾರಿಗ ಆತ, ನಿನ್ನ ಹಾಗೆ ವೈಮರಿತವ ಅಲ್ಲ.. ನಿಮ್ಮ ತಂಗಿಗೆ ಏನು ಬೇಕಾಗಿದೆ ನೋಡುವೆ.. ಊಟಕ್ಕೆ ತಡಮಾಡಬೇಡಿರಿ.. ಇವನ್ನೆಲ್ಲ ಇಲ್ಲಿ ಯಾಕೆ ಹರವಿದರೊ? ಒಳಗ ಕೂಸಿನ ಕೆಲಸಕ್ಕಾದರೂ ಬರುವದು (ಎಂದು ರಾಮಣ್ಣನು ಕುರ್ಚಿಯ ಮೇಲೆ ಒಗೆದ ವೃತ್ತಪತ್ರವನ್ನು ತೆಗೆದುಕೊಂಡು ಹೊರಡುವಳು.)

**ರಾಮಣ್ಣ**:— (ಅದನ್ನು ನೋಡಿ) ಕೂಸಿನ ಕೆಲಸಕ್ಕೆ ಕನ್ನಡ ವರ್ತಮಾನ ಪತ್ರ ಸ್ಪೆಶಲ್ ಹೊರಡಿಸತಾರಮ್ಮ!.. ಅವು....

( ಸುಂದರವ್ವ ನಕ್ಕು ಅದನ್ನು ಇಟ್ಟು ಹೋಗುವಳು. ರಾಮಣ್ಣನು ಮತ್ತೆ ಓದುತ್ತ ಕುಳಿತುಕೊಳ್ಳುವನು. ಇಷ್ಟರಲ್ಲಿ ಹೊರಗಿನಿಂದ **ಶೀನಣ್ಣನೂ ಗೋಪಾಲಾಚಾರ್ಯನೂ** ಬರುವರು. **ಶೀನಣ್ಣನ** ಕೈಯ್ಯಲ್ಲಿ ಕೊಡೆ; ಮೈಮೇಲೆ ಉದ್ದ ಕೋಟು. **ಗೋಪಾಲಾಚಾರ್ಯನು** ಮಳೆಯಲ್ಲಿ ಬಂದುದರಿಂದ ಹೊದ್ದುಕೊಳ್ಳುವ ಧೋತರವನ್ನು ತಲೆಯ ಮೇಲೆ ಹೊದ್ದಿರುವನು. )

**ಶೀನಣ್ಣ:—** ( ಕೋಟು ತೆಗೆಯುತ್ತ ) ಒಂದು ಯಾಕೆ, ಸಾವಿರ ಹೇಳುವೆ. . ಹುಂ, ಈ ಕೋಟು ತೆಗೆದಿಡೊ.... ಸಾವಿರ, ತಿಳಿಯಿತೆ ?.. ಏ ಗುರುಸಿದ್ಧಾ, ಈ ಕೋಟು, ಕೊಡೆ ತೆಗೆದಿಡೊ. ( ಕೈಯಲ್ಲಿ ಕೊಡೆಯಿದ್ದುದರಿಂದ ಕೋಟು ತೆಗೆಯಲು ಬಾರದೆ ಕೆರಳಿ ) ಛೆ, ಮನೆಯಲ್ಲಿ ಯಾರೂ ಇಲ್ಲವೇನೊ ? ಗುರುಸಿದ್ಧಾ . . ( ರಾಮಣ್ಣನು ಎದ್ದು ಬಂದು ಕೋಟು ಕೊಡೆಗಳನ್ನು ಒಳಗೆ ಒಯ್ಯುವನು ) ಗುರುಸಿದ್ಧ ಎಲ್ಲಿ ಹೋದನೊ ? ಮನೆಗೆ ಬಂದರೆ ಸುಳಿವೇ ಇಲ್ಲ ಯಾರದೂ !....ಹುಂ, ಸಾವಿರ ಹೇಳುವೆ ಎಂದೆ.

**ಗೋಪಾ:—** ಒಂದಾದರೆ ಸಾಕು. ಆಧಾರವೆಂದರೆ ವೇದದಲ್ಲಿಯೆ ಇರಬೇಕೆಂದು ನನ್ನ ಹಟವಿಲ್ಲ. ಯಾಕೆಂತೆಂದರೆ ಕಾಲಿದಾಸನ ನಾಟಕದಲ್ಲಿದ್ದರೂ ನಡೆಯುವದು. ಮುಖ್ಯ, ಸಂಸ್ಕೃತದಲ್ಲಿರಬೇಕು. ಯಾಕೆಂತೆಂದರೆ, ಶಾಸ್ತ್ರ ಬರೆಯುವದು ಸಂಸ್ಕೃತದಲ್ಲಿ. ಸಂಸ್ಕೃತ ಯಾಕೆಂತೆಂದರೆ ದೇವ ಭಾಷೆ. ಆದ್ದರಿಂದ ಒಂದು ಸಾಕು. ಯಾಕೆಂತೆಂದರೆ ಆಧಾರವೆಂದರೆ ಶಾಸ್ತ್ರ.

**ಶೀನಣ್ಣ:—** ಎಲ್ಲರಿಗೂ ತಿಳಿಯಬೇಕಲ್ಲ ? ( ಕುರ್ಚಿಯ ಮೇಲಿನ ವೃತ್ತಪತ್ರವನ್ನು ತೆಗೆದುಕೊಂಡು ಒಳಗೆ ನೋಡಿ ) ಕೃಷ್ಣಾತಾಯಿ ಬಂದು ಹೋದಳೇನು ? ಏನು ? ಛೆ ! ಮನೆ ಅಂದರೆ ಒಂದಕ್ಕೊಂದು ತಾಳಮೇಳವೆ ಇಲ್ಲ. . ( ಗೋ. ನಗೆ ) ಹೇಳಿದ್ದು ತಿಳಿಯಲಿಲ್ಲ ಅಂದರೆ ಅದು ಆಧಾರ ಹೇಗೆ ? ( ಮತ್ತೆ ಒಳಗೆನೋಡಿ, ) ಏನು ? ಕೃಷ್ಣಾತಾಯಿ ಬಂದು ಹೋದಳೇನು ಎಂದು ಕೇಳಿದೆ. ಛೆ ! ಮನೆಯೊಳಗೆ ಯಾರು ಇದ್ದಾರೊ ಇಲ್ಲವೊ ಹೀಗಿದೆ !.. ( ಕೆರಳಿ ಗೋ. ನಗೆ ) ನಿಮ್ಮ ಈ ಹಾಳು ಸಂಸ್ಕೃತದೊಳಗೆ ಹೇಳಿದರೆ ಯಾರಿಗೆ ತಿಳಿಯುವದು ?

**ಗೋಪಾ:—** ತಿಳಿಯಬೇಕು ಎಂಬುವ ನಿಯಮವಿಲ್ಲ. ಯಾಕೆಂತೆಂದರೆ ಅದು ಆಧಾರ. ಅದಕಾಗಿಯೆ ಸಂಸ್ಕೃತದಲ್ಲಿ ಹೇಳಿರಿ ಎಂದೆ. ಯಾಕೆಂ–ತೆಂದರೆ ಯಾರಿಗೂ ತಿಳಿಯುವುದಿಲ್ಲ; ಅದಕ್ಕೆ ಎಲ್ಲರೂ ನಂಬುವರು. ಯಾಕೆಂತೆಂದರೆ— ಅಹುದಲ್ಲೊ ಹೇಳಿರಿ.

( ರಾಮಣ್ಣನು ಬರುವನು )

**ಶೀನಣ್ಣ :—** ಕೃಷ್ಣಾತಾಯಿ ಬಂದು ಹೋದವಳೇನು ? (ಗೋ. ನಿಗೆ) ಜನರಿಗೆ ತಿಳಿಯುವದು ಮುಖ್ಯ. ಇಲ್ಲವಾದರೆ (ರಾ. ನಿಗೆ) ಹೇಗಿದೆ ಈಗೆ ? ( ಗೋ. ನಿಗೆ ) ಸಾವಿರ ಹೇಳುವೆ ಎಂದೆ. ( ರಾ. ನಿಗೆ ) ನಿದ್ರೆ ಹತ್ತಿದೆ ಏನು?

**ರಾಮಣ್ಣ:—** ಇಲ್ಲ.

**ಶೀನಣ್ಣ:—** ( ಗೋ. ನಿಗೆ ) ಕುಳಿತುಕೊಳ್ಳಿ. ಬಂದೆ. ಒಂದಲ್ಲ ಸಾವಿರ ಹೇಳುವೆ ( ಹೋಗುವನು ).

**ರಾಮಣ್ಣ:—** ಏನದು ಹೇಳುವದು ?

**ಗೋಪಾ:—** ( ದೋತರದಿಂದ ನೀರು ತೆಗೆಯುತ್ತ ) ಏನಿಲ್ಲ, ಸಹಜ–ವಾಗಿ ಏನೊ ಕೇಳಿದೆ. ( ದೋತರವನ್ನು ಬಿಚ್ಚುತ್ತ ) ಯಾಕೆಂತೆಂದರೆ, ಸಂತಾನಸಂಯಮ ನಮ್ಮ ಧರ್ಮ ಎಂದು ಹೇಳಿದರು ಸಭೆಯಲ್ಲಿ. ಎಲ್ಲಿಯಾದರೂ ಸ್ಮೃತಿ, ಪುರಾಣಗಳಲ್ಲಿ ಇದೆಯೊ ಹೇಗೆ? ಯಾಕೆಂತೆಂದರೆ– ಇಲ್ಲವಾದರೆ ಧರ್ಮ ಎನ್ನೋದು ಹೇಗೆ ?

**ರಾಮಣ್ಣ:—** ಆ ಮಾತಿಗೆ ನಿಮ್ಮ ಒಪ್ಪಿಗೆಯಾದರೂ ಇದೆಯೇನು?

**ಗೋಪಾ:—** ರಾಯರು ಹೇಳಿದ ಮಾತಿಗೆ ನಮ್ಮ ಒಪ್ಪಿಗೆ ಇದ್ದೇ ಇದೆ. ಆದರೂ ಶಾಸ್ತ್ರದ ಆಧಾರವೊಂದು— ಯಾಕೆಂತೆಂದರೆ ಹೋಳಿಗೆಯ ಮೇಲೆ ತುಪ್ಪ ಬಿದ್ದ ಹಾಗೆ.

**ರಾಮಣ್ಣ:—** ಹೋಳಿಗೆಯ ಮೇಲೆ ತುಪ್ಪ ಬೀಳಬೇಕೆಂದು ಶಾಸ್ತ್ರದ ಆಧಾರವಿದೆಯೆ ?

**ಗೋಪಾ:**— ಛೆ, ಛೆ. ಲೌಕಿಕ ದೃಷ್ಟಾಂತ ಹೇಳಿದೆ. ಯಾಕೆಂತೆಂದರೆ ಲೌಕಿಕ ಮಾತು ಬೇರೆ, ಪಾರಮಾರ್ಥಿಕ ಮಾತು ಬೇರೆ. ಶಾಸ್ತ್ರ ಪಾರಮಾರ್ಥಿಕ; ಯಾಕೆಂತೆಂದರೆ- ನೀವೇ ನೋಡಿರಿ.

**ರಾಮಣ್ಣ:**— (ಅವನನ್ನೆ ನೋಡುತ್ತ) ಸಂತಾನ-ಸಂಯಮವೂ ಲೌಕಿಕ ಮಾತು. (ಎಂದು ಪುಸ್ತಕಗಳನ್ನಿಟ್ಟಲ್ಲಿ ಬರುವನು).

**ಗೋಪಾ:**— ಛೆ, ಛೆ ಅದು ಹೇಗಾದೀತು? ಪುಂನಾಮ್ನಃ ನರಕಾತ್ ತ್ರಾಯತೇ, ಯಾಕೆಂತೆಂದರೆ ಮಕ್ಕಳಿದ್ದರೆ ಸ್ವರ್ಗ ಎಂದು ಶಾಸ್ತ್ರವೇ ಹೇಳುವದು.

**ರಾಮಣ್ಣ:**— (ಪುಸ್ತಕಗಳನ್ನು ಎತ್ತಿಡುತ್ತ) ಶಾಸ್ತ್ರ ಹೇಳಿದ್ದನ್ನೆ ಕೇಳಬೇಕು ಎನ್ನೋದು ಯಾವ ಶಾಸ್ತ್ರದಲ್ಲಿದೆ?

**ಗೋಪಾ:**— ಅದು ಹೇಗೆ? (ಹಾಸಿಗೆಯ ಮೇಲೆ ಕುಳಿತು) ಯಾಕೆಂತೆಂದರೆ ಹಾಗೆ ಹೇಳೋದು ವೃಕ್ಷಬೀಜನ್ಯಾಯವಾಗಿ ವ್ಯರ್ಥವಾಗುವುದು. (ಕನ್ನಡಕಗಳನ್ನು ಹಾಕಿಕೊಳ್ಳುವನು).

**ರಾಮಣ್ಣ:**— (ಒಮ್ಮೆಲೆ ತಿರುಗಿ) ಹುಂ. ವೃಕ್ಷಬೀಜನ್ಯಾಯ! ಬುದ್ಧಿಯಿಂದ ಮನುಷ್ಯನೊ, ಮನುಷ್ಯನಿಂದ ಬುದ್ಧಿಯೋ? ಇದೂ ಒಂದು ವೃಕ್ಷಬೀಜನ್ಯಾಯ! ಬುದ್ಧಿಗೆ ಒಪ್ಪಿಗೆಯಾಯಿತೆಂದು ಹೇಳುವದು, ಒಪ್ಪಿಗೆಯಾದ ಮೇಲೆ ಬುದ್ಧಿ ಇಲ್ಲದೆ ಮಾತನಾಡುವದು! ಇದೂ ಒಂದು ವೃಕ್ಷಬೀಜನ್ಯಾಯವೆ ಅಲ್ಲವೆ? ನೋಡುವದಕ್ಕೆ ಕಣ್ಣು ಎಂದು ಹೇಳುವದು, ನೋಡಬೇಕಾದಲ್ಲಿ ಕಣ್ಣು ಮುಚ್ಚುವದು! ಇದೂ ಒಂದು ವೃಕ್ಷಬೀಜನ್ಯಾಯವೆ ಅಲ್ಲವೆ? (ಅಣಕಿಸಿಂದ) ಯಾ-ಕೆಂ-ತೆಂ-ದ-ರೆ, ಒಳಗೆ ಒಂದು, ಹೊರಗೆ ಮತ್ತೊಂದು; ನೆಲದೊಳಗೆ ಬೀಜ, ನೆಲದ ಮೇಲೆ ವೃಕ್ಷ. (ಮತ್ತೆ ಮೊದಲಿನ ಕೆಲಸದಲ್ಲಿ ತೊಡಗುವನು).

**ಗೋಪಾ:**—(ನೊಂದು, ತ್ವೇಷದಿಂದ) ಅದಕಾಗಿಯೆ ಹೇಳಿದೆ ನಾನೂ ವೃಕ್ಷಬೀಜನ್ಯಾಯ ವ್ಯರ್ಥ ಎಂದು. ಯಾಕೆಂತೆಂದರೆ, ರಾಯರಲ್ಲಿ ವಿಶ್ವಾಸ ನಮ್ಮದು. ನಮ್ಮ ರಾಯರೆ ಹೀಗೆ ಹೇಳಿದರಲ್ಲ! ಯಾಕೆಂತೆಂದರೆ, ರಾಯರ ಮನೆಯೊಳಗೆಯೆ—

**ರಾಮಣ್ಣ:**— (ತಿರಸ್ಕಾರದಿಂದ) ಈಗ್ಗೆ ನಮ್ಮ ಮನೆಯ ಹರಟೆ ನಡೆದಿಲ್ಲ. (ಆಳು ಬರುವನು) ಯಾಕೊ, ಮುಟ್ಟಿಸಿ ಬಂದೆಯೇನೊ?

**ಗುರುಸಿದ್ಧ:**— ಇದೇನೊ ಕೊಟ್ಟಾರ್ರಿ. (ರಾಮಣ್ಣನು ಕಾಗದದ ಪುಡಿಕೆಯನ್ನು ತೆಗೆದುಕೊಂಡು ಒಳಗೆ ಹೊರಡುವನು). ಮತ್ತ ನೋಡಿರಿ, ಬಡಿಗೆ ಒಯ್ದಿದ್ದಿಲ್ಲ ಅಂದರ ಶಿವನ ನಂದಿ ಆಗತಿದ್ದೆ.

**ರಾಮಣ್ಣ:**— ಹುಂ. ಮೊದಲು ಬಾಗಿಲು ಮುಚ್ಚು. ಅದೇನು ನಿನ್ನ ಬಾಯಿಯೆಂದು ತಿಳಿದಿರುವೆಯೇನೊ ಯಾವಾಗಲೂ ತೆರೆದಿಡಲಿಕ್ಕೆ? (ಒಳಗೆ ಹೋಗುವನು).

**ಗುರುಸಿದ್ಧ:**— ಅಲ್ಲ. ಹೆಣ್ಣುಮಕ್ಕಳ ಮಾತು. ಹೆಚ್ಚು ಕಾಳಜಿ ಬೇಕೂ ಅಂತ (ಬಾಗಿಲವನ್ನು ಮುಚ್ಚಿಬರುವನು).

**ಗೋಪಾ:**— (ಅವನನ್ನು ನೋಡಿ) ಗುಡಿಗೆ ಹೋಗಿದ್ದೆಯೇನೊ?

**ಗುರುಸಿದ್ಧ:**— (ಸಂಶಯದಿಂದ) ಮತ್ತೆಲ್ಲಿಯ ಗುಡಿ?

**ಗೋಪಾ:**— ಯಾಕೆಂತಂದರೆ ಶಿವನ ನಂದಿ ಎಂದೆ.

**ಗುರುಸಿದ್ಧ:**— ಅಂದರ ಕಾಲುಮುರಿದವರ ಹಾಗ ಮಡಚಿಕೊಂಡು ಬೀಳೋದು ಅಂತ.

**ಗೋಪಾ:**— ಕೃಷ್ಣಾತಾಯಿಯನ್ನು ಇಲ್ಲಿಗೆ ಕರೆದುಕೊಂಡು ಬರಲಿಕ್ಕೆ ಹೋಗಿದ್ದೆಯೇನೊ?

**ಗುರುಸಿದ್ಧ:**— (ಸಂಬಾರದೆ) ಇಲ್ಲಿಗೆ ಬಂದಿದ್ದರು; ಅವರನ್ನ ಅವರ ಮನೆಗೆ ಕರೆದುಕೊಂಡು ಹೋದೆ.

**ಗೋಪಾ:**— ಸಹಜವಾಗಿ ಕೇಳಿದೆ.

**ಗುರುಸಿದ್ಧ:**— ಇಲ್ಲ ಅಂತ ಯಾರು ಅಂದರು?

**ಗೋಪಾ:**— (ನಗೆಯ ನೆವದಿಂದ) ಯಾಕೆಂತೆಂದರೆ ಕೂಸಿಗೇನೊ ತಲೆ, ಕಾಲು ಅಂಕಡೊಂಕಾಗಿ ಇವೆಯಂತೆ. ಅದಕಾಗಿ—

**ಗುರುಸಿದ್ಧ:**— (ತಿರಸ್ಕಾರದಿಂದ) ಮಂದಿಯ ಬಾಯಿ ಅಂಕಡೊಂಕಾಗಿದೆ.

**ಗೋಪಾ:**— ಅದೇ. ಅದೇ. ಯಾಕೆಂತೆಂದರೆ ನೀನು ಮನೆಯವ. ಮನೆಯ ಸುದ್ದಿ ನಿನಗೆ ಗೊತ್ತಿರಬಹುದು ಎಂದು. ಅದಕಾಗಿ—

**ಗುರುಸಿದ್ಧ:**—( ಅಸಹ್ಯದಿಂದ ದಿಟ್ಟಿಸಿ ) ಅಷ್ಟೇನೊ ನನಗೆ ಗೊತ್ತಿಲ್ಲ. ಮಂದಿಯ ಮನೆಯ ಸುದ್ದಿ ಕೇಳಬಾರದು ಹೇಳಬಾರದು ಅಂತ ನನಗ ಗೊತ್ತು.

**ಗೋಪಾ:**— ಅದೇ. ಅದೇ. ನಿನ್ನ ಬಾಯಿ ಯಾವಾಗಲೂ ತೆರೆದಿರುವದು ಅಂತ ರಾಮಣ್ಣನವರು ಹೇಳಿದರು. ಕೇಳಿದೆ ಅದಕಾಗಿ—

**ಗುರುಸಿದ್ಧ:**—( ಬೆಪ್ಪಾಗಿ ) ಎಲ ಶಿವನ! ( ಹೊರಗೆ ಹೊರಡುತ್ತ ) ಬಡವರು ನಾವು. ಹೊಟ್ಟಿಗಾಗಿ ದುಡಿಯಲಿ ಬೇಕು. ದುಡಿದು ತೇಕ ಹತ್ತಿ ನಮ್ಮ ಬಾಯಿ ತೆರೆಯುವದು. ( ಎಂದು ಬಾಗಿಲನ್ನು ಅರ್ಧತೆಗೆದು, ನಿಂತು, ಒಮ್ಮೆಲೆ ಖೊಳ್ಳೆಂದು ನಗುವನು. ಗೋಪಾಲಾಚಾರ್ಯನು ಅತ್ಯಂತವಾದ ಸಿಟ್ಟಿನಿಂದ ತನ್ನನ್ನು ನೋಡಲು ನಗೆ ತಡೆದು ) ನಿಮಗ ನಗಲಿಲ್ಲರಿ. ಹಹಾಂ ನನ್ನದೇ ಹುಚ್ಚುತನ. ತೆರೆದರೆ ಕೊಡೆ, ಮುಚ್ಚಿದರೆ ಅದೇ ಬಡಿಗೆಯೂ ಆಗತಿತ್ತಲ್ಲ. ಹಹಾ! ( ಎಂದು ಲಾಂದರು ತೆಗೆದುಕೊಂಡು ಹೊರಗೆ ಹೋಗುವನು. ಗೋಪಾಲಾಚಾರ್ಯನು ಉಸ್ಸೆಂದು ಓದಹತ್ತುವನು. ಇಷ್ಟರಲ್ಲಿ ಸುಂದರಮ್ಮನು ಬರುವಳು ).

**ಸುಂದರಮ್ಮ:**—ಗೋಪಾಲಾಚಾರ್ರ್ರೆ, ಬಂದವರು ಇಲ್ಲಿಯೆ ನಿಂತು ಬಿಡಬೇಕೆ? .. ಏಳಿರಿ, ಇಲ್ಲಿಯೆ ಊಟ ಮುಗಿಸಿಕೊಂಡು ಹೋಗಿರಿ.

**ಗೋಪಾ:**—ಛೆ, ಛೆ, ಮನೆಗೆ ಹೋಗಲೇಬೇಕು. ಯಾಕೆಂತೆಂದರೆ ಮನೆಯೊಳಗೆ ವಿಶೇಷ ಇದೆ.

**ಸುಂದರಮ್ಮ:**— ಏನು ಈ ಹೊತ್ತು ?

**ಗೋಪಾ:**—ಹಾಗಲ್ಲ. ಯಾಕೆಂತೆಂದರೆ ವಿಶೇಷ ಅಂದರೆ ವಿಶೇಷ ಕಾರಣ. ಇರುವದೇನು ? ಹೋದರೆ ದಿನದ ಊಟ, ( ನಕ್ಕು ) ಹೋಗಲಿಲ್ಲವಾದರೆ ಸಮಾರಾಧನೆ.

**ಸುಂದರಮ್ಮ:**— ಸಾಕು. ಅನಾಯಾಸ ಮನೆಗೆ ಬಂದ ಬ್ರಾಹ್ಮಣನ್ನ ಬಿಟ್ಟು ಮತ್ತೆ ಯಾವ ಪಾಪ ಕಟ್ಟಿಕೊಳ್ಳಲಿ?.. ಹಂ. ಸಮಾರಾಧನೆ

ಅಂದ ಮಾತಿಗೆ ನೆನಪಾಯ್ತು. ನಮ್ಮಲ್ಲಿ ಶಾಂತಿ ಇವೆಯೊ ಏನೊ ಅಂತ ಕೇಳಬೇಕೆಂದು ಮಾಡಿದ್ದೆ.

**ಗೋಪಾ:—** ( ನಗೆಯಿಂದ ) ಬ್ರಾಹ್ಮಣಗೆ ಕೇಳುವ ದಿವಸ ಹೋದ-ವಮ್ಮಾ! ಯಾಕೆಂತೆಂದರೆ ಇದು ರಾಯರ ಮನೆಯ ವ್ಯವಹಾರ.

**ಸುಂದರಮ್ಮ:—** ( ಮುಂದೆ ಬಂದು ) ಅದಲ್ಲ ನಾನು ಕೇಳೋದು.. ಏನೊ.. ಎಲ್ಲರೂ ಹೇಳಿದರು. ( ಅತ್ತಿತ್ತ ನೋಡಿ ಮೆಲುದನಿಯಲ್ಲಿ ) ನಮ್ಮ ಶೀನಣ್ಣನ ಹೆಂಡತಿ.. (ತಡೆದು) ನನಗೇನು ವಿಶ್ವಾಸ ಇಲ್ಲ ಹಾಗೆ ಕೇಳಿದರೆ.... ಆದರೂ ಇದ್ದವರ ಕಾಳಜಿ ಮಾಡಬೇಕಲ್ಲ, ಗೋಪಾಲಾಚಾರ್ರೆ? ನನಗ ಎಲ್ಲರೂ ಅಂತಾರೆ "ಸುಂದರಮ್ಮಾ, ನೀನು ಇಲ್ಲದ ಕಾಳಜಿ ಬಹಾಳ ಮಾಡುವಾಕೆ ನೋಡು" ಅಂತ. ಬಿಡು ಅಂದರೆ ಹೇಗ ಬಿಟ್ಟೇತು ಹೇಳಿರಿ? ಇದ್ದವರನ್ನು ನೋಡಬೇಕು, ಹೋದವರಂತೂ ಹೋದರು ಅಂದರೆ— ( ಮೆಲುದನಿಯಲ್ಲಿ ) ಶೀನಣ್ಣನ ಹೆಂಡತಿ ಮನೆ ಹೊಕ್ಕಾಳೆ ಅಂತ—

**ಗೋಪಾ:—** ( ಕನ್ನಡಕ ಹಣೆಗೇರಿಸಿ ) ಏನು? ಮನೆಯ ಯಜ-ಮಾನತಿ—

**ಸುಂದರಮ್ಮ:—** ( ತಲೆತೂಗಿ ) ಒಂದಿಬ್ಬರು ನೋಡಿದರು ಕೂಡ ಅಂತೆ.... ಮೊನ್ನಿನ ಅಮಾವಾಸ್ಯೆಯ ರಾತ್ರಿ ತುಳಸಿಕಟ್ಟೆ ಸುತ್ತು ಹಾಕತಿತ್ತು ಅಂತೆ.

**ಗೋಪಾ:—** ( ಬೆದರಿದವನಂತೆ ) ಎಲ! ಏನಿದು! ಯಾಕೆಂತೆಂದರೆ ಅದಕ್ಕೆ ಏನಾದರೂ ಉಪಾಯ ಮಾಡಬೇಕು, ತೀವ್ರ ಮಾಡಬೇಕು. ಭೂತಬಾಧಾ, ಯಾಕೆಂತೆಂದರೆ, ಏನಾದರೂ ಆಗಬಹುದು.

**ಸುಂದರಮ್ಮ:—** ಮನೆಯೊಳಗಿನ ಹೆಂಗಸರ ಮೇಲೆ ಸಿಟ್ಟು ಇದ್ದಿರ-ಬೇಕೂ ಅಂತ ಯಾರೊ ಲೆಕ್ಕದಿಂದ ಕಾಯಾಸ ಕಟ್ಟಿದರಂತೆ. ಅದಕ್ಕೆ "ಸುಂದರಮ್ಮಾ, ಮನೆಯೊಳಗೆ ಹುಟ್ಟಿದ ಕೂಸುಗಳಂತೂ ಬದುಕುವದೇ ಇಲ್ಲ; ಬಾಣಂತಿಯು ಸಲುವಾಗಿ ಎಚ್ಚರ" ಅಂತ ಹೇಳಿದರು ನನಗ.

**ಗೋಪಾ:—**( ವಿಚಾರಿಸಿ) ಹು. ನೀವೇ ಮಾತು ತೆಗೆದಿರಿ, ಹೇಳುವೆ. ಯಾಕೆಂತೆಂದರೆ, ಎರಡನೆಯುವರ ಮಾತಿಗೇನು ? ಆದರೂ, ನೋಡಿರಿ, ಯಾಕೆಂತೆಂದರೆ, ಎರಡನೆಯುವರನ್ನು ಬಿಟ್ಟು ಸಹಿಯುವದು ಹೇಗೆ ? ಯಾಕೆಂತೆಂದರೆ, ಈಗ ನಿಮ್ಮ ರಾಮಣ್ಣನ ಮದಿವೆಯ ಮಾತು— ಯಾಕೆಂತೆಂದರೆ ನೋಡಿರಿ, ಇದೇ ಸುದ್ದಿಯಿಂದ ಬಂದ ಹೆಣ್ಣು ತಿರುಗಿ-ಹೋದುವು. ಯಾಕೆಂತೆಂದರೆ, ನನ್ನ ಕಿವಿಗೆಯೆ ಬಿದ್ದ ಮಾತು.

**ಸುಂದರಮ್ಮ:—** ಮತ್ತೆ ಹೇಳಿದರು “ ಸುಂದರಮ್ಮಾ, ಸುಳ್ಳಾದರೆ ಸಕ್ಕರಿಯ ಹಾಗ. ಆದರೂ ಒಲಿ ಕೆದರಿ ಬೂದಿ ಯಾಕೆ ಹಾರಿಸಿಕೊಳ್ಳ-ಬೇಕು ? ಒಂದು ಮುತ್ತೈದೆಗೆ ಸೀರೆ ಉಡಿಸಿಬಿಡು ” ಅಂದರು. ಯಾರಿಗೂ ತಿಳಿಯದ ಹಾಗ ಮಾಡಬೇಕು. ಎಷ್ಟೊಂದು ಕಾಳಜಿ ಮಾಡಬೇಕು ನೋಡಿರಿ. ನಮ್ಮ ಶೀನಣ್ಣನ ಕಿವಿಗೆ ಬೀಳಬಾರದು. ಮತ್ತೆ—

**ಗೋಪಾ:—** ಓಹೊ, ಯೋಗ್ಯವೇಳೆಗೆ ಸ್ಮರಣೆಗೆ ಬಂದಿತು. ಯಾಕೆಂತೆಂದರೆ ಇದೂ ರಾಯರ ಕಿವಿಗೆ ಬೀಳಬಾರದು. ( ಆಶ್ಚರ್ಯದಿಂದ ) ಈಗ ನೀವು ಒಂದು ದಾನ ಎನ್ನುವಿರಿ, ಒಂದು ಧರ್ಮ ಎನ್ನುವಿರಿ. ಯಾಕೆಂತೆಂದರೆ ದೇವರಲ್ಲಿ ವಿಶ್ವಾಸ ನಿಮ್ಮದು. ಬ್ರಾಹ್ಮಣರು ಎಂದು ನಮ್ಮಂತಹರನ್ನು ಕರೆದು ಕೊಡುವಿರಿ. ಯಾಕೆಂತೆಂದರೆ “ಮುತ್ತೈದೆಗೆ ಸೀರೆ ಉಡಿಸೋದು, ಗೋಪಾಲಾಚಾರ್ರೆ, ನಿಮ್ಮ ಮನೆಯಾಕೆಗೆ ಮುಟ್ಟಿಸಿರಿ” ಎಂದು ಹೇಳುವಿರಿ. ಯಾಕೆಂತೆಂದರೆ, ಪರಮಾತ್ಮನ ಪ್ರೇರಣೆ ಅದು.

**ಸುಂದರಮ್ಮ:—** ಏನೊ, ದೇವರು ಕೊಟ್ಟ ಶಕ್ತಿ ; ಇರೋತನಕ ಮಾಡತೀನಿ ನಾನು.

**ಗೋಪಾ:—** ಅದೇ. ಅದೇ. ಯಾಕೆಂತೆಂದರೆ ರಾಯರು ಕೂಡ ದಾನಕ್ಕೆ ಹಿಂದು-ಮುಂದು ನೋಡುವದಿಲ್ಲ. ಆದರೂ ಮಾನವನು ಕ್ಷುದ್ರ ಜಂತು. ದ್ವೇಷ-ದುರ್ಬುದ್ಧಿ-ಮತ್ಸರಾದಿಗಳ ಸಂಸಾರಸಾಗರದಲ್ಲಿ—ಯಾಕೆಂತೆಂದರೆ, ನೋಡಿರಿ, ಇಲ್ಲವಾದರೆ ಇಂತಹ ಮಾತು ಆಡುತ್ತಿದ್ದರೇಕೆ?

ಎರಡನೆಯವರಿಗೆ ಕೆಟ್ಟ ಹೆಸರು ಕೊಡುವದೆಂದರೆ- ಯಾಕೆಂತೆಂದರೆ ಎಂತಹ ಪಾಪ ಅದು !

**ಸುಂದರಮ್ಮ:**— ನಿಮಗೆ ಹೆಸರಿಟ್ಟವರು ಏಳೇಳು ಜಲ್ಮದೊಳಗ—

**ಗೋಪಾ:**— ಅಲ್ಲ, ನನ್ನ ಮಾತಲ್ಲ. ಯಾಕೆಂತೆಂದರೆ, ನನಗೇನು ? ಅನಂತಕೋಟಿ-ಬ್ರಹ್ಮಾಂಡಲೋಕಗಳಲ್ಲಿ ತೃಣಮಾತ್ರ ನಾನು. ಆದರೂ ರಾಯರ ಮಾತು ಬೇರೆ. ಯಾಕೆಂತೆಂದರೆ ದಾನಮಾಡುವದು ಅವರ ಹುಟ್ಟುಗುಣ.. ಕೊಟ್ಟಿರಬಹುದು. ಯಾಕೆಂತೆಂದರೆ, ನನಗೂ ಕೊಟ್ಟಿರುವರು. ಅದರಂತೆ ಕೃಷ್ಣಾತಾಯಿಗೂ ಕೊಟ್ಟಿರಬಹುದು. ದಾನ, ಯಾಕೆಂತೆಂದರೆ, ಅದು.

**ಸುಂದರಮ್ಮ:**— ( ತಿಳಿಯದೆ ) ಏನು ? ಕೃಷ್ಣಾತಾಯಿಗೆ ದಾನ ?

**ಗೋಪಾ:**— ( ಗಂಭೀರವಾಗಿ ) ಕೊಟ್ಟಿರಬಹುದು, ಸುಂದರಮ್ಮ. ಯಾಕೆಂತೆಂದರೆ ದಾನ ಅದು. ಅವಳಿಗೂ ಹಣೆತುಂಬ ಕುಂಕುಮ.. ಆದರೂ ೮-೧೦ ವರ್ಷ ತಪ್ಪದೆ ತಿಂಗಳಿಗೆ ಇಷ್ಟು ಎಂದು ಯಾಕೆ ಕೊಟ್ಟಿರುವರು ? ಎಂದು ಜನರ ಆಕ್ಷೇಪ. ಯಾಕೆಂತೆಂದರೆ ಮತ್ಸರ ಅದು— ಮತ್ಸರ.

**ಸುಂದರಮ್ಮ:**— ( ಇನ್ನೂ ತಿಳಿಯದೆ ) ೮-೧೦ ವರ್ಷ ದಾನವೆ ?

**ಗೋಪಾ:**— ಇರಬಹುದು, ಸುಂದರಮ್ಮಾ. ಯಾಕೆಂತೆಂದರೆ, ನಾನು ಎಷ್ಟು ವರ್ಷಗಳಿಂದ ರಾಯರ ಪ್ರಸಾದ ಪಡೆಯುತ್ತಿರುವೆ? ಯಾಕೆಂತೆಂದರೆ, ಸುಮ್ಮನೆ ಏನಾದರೂ ಮಾತನಾಡಿದರೆ ಹೇಗೆ ?

**ಸುಂದರಮ್ಮ:**— ಏನ ತಾಯೀ, ಕೊಡುವದಕ್ಕಾದರೂ ಮಿತಿ ಇದೆ ಇಲ್ಲವೊ ?

**ಗೋಪಾ:**— ಆದರೂ ರಾಯರ ಸ್ವಭಾವ ಗೊತ್ತಿಲ್ಲವೆ ನಮಗೆ ? ಯಾಕೆಂತೆಂದರೆ, ನನ್ನದೇ ಆ ಅವಧಿಯಲ್ಲಿ ಮೂರು ಮದಿವೆ ಆದುವು—

**ಸುಂದರಮ್ಮ:**— ( ಉಸುರ್ಗರೆದು ) ಹೌದು. ನಿಮಗೂ ಕೆಟ್ಟಗಾಲೇ ಬಂದಿದೆ.

**ಗೋಪಾ:—** ( ತನ್ನ ಮಾತು ಆವಳಿಗೆ ತಿಳಿಯಲಿಲ್ಲವೆಂದು ಕಂಡು ) ಈಶಚಿತ್ತ, ಸುಂದರಮ್ಮಾ, ಯಾಕೆಂತೆಂದರೆ ಅದಕ್ಕೆ ಉಪಾಯವಿಲ್ಲ. ದೇವರೇ ಕೊಡಲಿಕ್ಕೆ ನಿಂತರೆ ಯಾರದೇನು ನಡೆಯುವದು? ಸುಖ, ದುಃಖ ಬಿಟ್ಟಲ್ಲ. ಯಾಕೆಂತೆಂದರೆ ಹಗಲು ರಾತ್ರಿ ಇದ್ದ ಹಾಗೆ. ಸುಖಕ್ಕೆ ಹಿಗ್ಗುವದು, ದುಃಖಕ್ಕೆ ಕುಗ್ಗುವದು ಧರ್ಮ ಅಲ್ಲ. ಯಾಕೆಂತೆಂದರೆ, ಹಗಲು ಊಟ ಮಾಡುವೆ, ರಾತ್ರಿ ಉಪವಾಸ ಮಾಡುವೆ ಎನ್ನುವ ಹಾಗೆ ಹುಚ್ಚು ಅದು.

**ಸುಂದರಮ್ಮ:—** ( ಎಲ್ಲವನ್ನು ತಿಳಿದುಕೊಂಡವಳಂತೆ ) ಆಡಿದ ಜನ ಕಾಡಿಗೆ ಹೋಗೋದು, ಗೋಪಾಲಾಚಾರ್ರೆ. ಯಾರು ಆಡಿಕೊಂಡರೇನು? ನಿಮ್ಮಂತಹರಿಗೆ ಕೊಟ್ಟರೆಯೆ ಅದೊಂದು ಪುಣ್ಯ. ಮತ್ತೆ ಯಾರಾದರೂ ಇದ್ದರ ನನಗೇನು ಕೆಟ್ಟು ಅನಿಸುತ್ತಿದ್ದಿಲ್ಲ. ನಿಮ್ಮಂತಹರು ಬಂದು ನಮ್ಮ ಮನೆಯಿಂದ ಉಪವಾಸ ಹೋಗುವದೆ? ನನಗ ಯಾವ ನರಕ ಕಾದು ನಿಂತಿದೆ?

**ಗೋಪಾ:—**( ಎದ್ದು ) ಆದೇ. ಆದೇ. ಯಾಕೆಂತೆಂದರೆ (ನಗೆಯಿಂದ) ಸಹಸಾ ಎಲ್ಲಿಯೂ ನಾನು ರಾತ್ರಿ ಅನ್ನಗ್ರಹಣ ಮಾಡುವದಿಲ್ಲ. ರಾಯರ ಮಾತು ಬೇರೆ. ಕೃಷ್ಣಾತಾಯಿಯಾದರೇನು? ( ರಾಮಣ್ಣನು ಬಂದದ್ದನ್ನು ನೋಡಿ ) ಕೃಷ್ಣಾತಾಯಿ ಮಹಾಸಾಧ್ವಿ.

**ರಾಮಣ್ಣ:—** ( ಮುಂದೆ ಬಂದು ಸುಂದರಮ್ಮನಿಗೆ ) ನೀವಿಲ್ಲಿ ಸಾಧ್ವಿಯರ ಪುರಾಣ ನಡೆಸಿದಿರಿ, ಒಳಗೆ—

**ಸುಂದರಮ್ಮ:—** ( ಹೋಗುತ್ತ ) ಬಂದೆ, ಬಂದೆ. ಹೋಗುವ ಮುಂದೆ ಸೀರೆ ಒಯ್ಯಲು ಮರೆಯಬೇಡಿರಿ. ಬೇಗ ಏಳಿರಿ, ಗೋಪಾಲಾಚಾರ್ರೆ. ( ಹೋಗುವಳು ).

**ಗೋಪಾ:—** ಬಂದೆ. ಯಾಕೆಂತೆಂದರೆ—

**ರಾಮಣ್ಣ:—** ( ನಕ್ಕು ) ಕೊನೆಗೆ ನಿಮಗೆ ಆಧಾರ ಸಿಕ್ಕಿತು.

**ಗೋಪಾ:**— ( ಬಟ್ಟೆ ತೆಗೆದಿಡಬೇಕೆಂದಿದ್ದು, ಅದನ್ನು ತಡೆದು, ಮೇಲಕ್ಕೆ ನೋಡಿ ) ಭಕ್ತರ ಆಧಾರ ಆತನೆ. ಯಾಕೆಂತೆಂದರೆ ತನ್ನವರ ಯೋಗಕ್ಷೇಮ ವಹಿಸುವೆ ಎಂದು ಹೇಳಿರುವ. ತಾನಾಗಿಯೆ ಹೇಳಿರುವ. ಯಾಕೆಂತೆಂದರೆ—

**ರಾಮಣ್ಣ:**— ( ನಡುವೆಯೆ ) ಯಾಕೇನು ? ಎಲ್ಲರಿಗೂ ಗೊತ್ತಿದೆ.... ಆದರೂ ಕೈಲಾಗದವರಿಗೆ ಸೀರೆ ಉಡಿಸುವಷ್ಟು ಜಾಣತನ ಇದೆ ಅಂದ ಹಾಗಾಯ್ತು ನಿಮ್ಮ ದೇವನಿಗೆ? ( ಆರಾಮ ಕುರ್ಚಿಯ ಬದಿಯ ಮೇಲೆ ಕುಳಿತುಕೊಳ್ಳುವನು ).

**ಗೋಪಾ:**—( ಒಮ್ಮೆಲೆ ) ಅಯ್ಯೊ, ಮಹಾರಾಯಾ ! ಯಾಕೆಂತೆಂದರೆ, ಆ ಸೀರೆ ನನಗಲ್ಲ.

**ರಾಮಣ್ಣ:**— ( ಕೊಂಕಿನಿಂದ ) ನಿಮಗೆ ಅಲ್ಲ ಅನ್ನೋದೇ ನನಗೆ ಖೇದ— ಮತ್ತೂ ಆಶ್ಚರ್ಯ !.. ಹುಂ. ಇಷ್ಟೊಂದು ಕ್ರಾಂತಿ ನಡೆದಲ್ಲಿ ನಿಮ್ಮ ದೇವನಿಗೆ ಕೂಡ ಬುದ್ಧಿ ಯಾಕೆ ಬಂದಿರಬಾರದು?.. ದೇವರು ಶಾಶ್ವತ ಎಂದರೆ ಅವನ ಬುದ್ಧಿಯೂ ಶಾಶ್ವತ ಎಂಬೋ ನಿಯಮ ಇದೆಯೇನು ಮತ್ತೆ ಶಾಸ್ತ್ರದಲ್ಲಿ?.... ಹೆಂಗಸರು ಕೂಡ ಸ್ವತಂತ್ರ, ಸಾಹಸಿ ಎಂದು ಸಾರಿ, ಬೀರಿ, ಸಿದ್ಧವಾಗಿರುವಂತಹ ಇಂತಹ ಕಾಲದಲ್ಲಿ ನಿಮ್ಮಂತಹರಿಗೆ ಸೀರೆ ಉಡಿಸುವದೆಂದರೆ ಅದೊಂದು ಸಲ್ಲಬಾರದ ಸನ್ಮಾನ !

**ಗೋಪಾ:**—( ಆಶ್ಚರ್ಯಾತಿರೇಕ ತೋರಿಸಿ ) ಇದೇನು ಸನ್ಮಾನ ! ಯಾಕೆಂತೆಂದರೆ, ಹಸಿದ ಕಾಲಕ್ಕೆ ಹರಿಹಾಯುವದು ! ಆ ಸೀರೆ ಒಂದು ಮುತ್ತೈದೆಗೆ—ಯಾಕೆಂತೆಂದರೆ— ಒಂದು ಸಾಧ್ವಿಗೆ—

**ರಾಮಣ್ಣ:**—( ಒಮ್ಮೆಲೆ ) ಓಹೊ ! .. ಈಗ ತಿಳಿಯಿತು.... ಕೃಷ್ಣಾತಾಯಿ ಮಹಾಸಾಧ್ವಿ ಎಂದು ಹೇಳುತ್ತಿದ್ದಿರಲ್ಲವೆ ?

**ಗೋಪಾ:**—ಅದೇ ಅದೇ. ಯಾಕೆಂತೆಂದರೆ ನಾನು ಹೇಳಿದ್ದಕ್ಕೆ ಒಪ್ಪಲಿಲ್ಲ ಸುಂದರಮ್ಮನವರು. “ ನಿಮ್ಮಂತಹ ಸಾಧು ಬ್ರಾಹ್ಮಣರಿಗೆ— ” ಅಂದರೆ ನನಗೆ ಎಂದು ಆ ದೊಡ್ಡಮನಸ್ಸಿನ ಸುಂದರಮ್ಮನವರು ಹೇಳಿದ್ದು— ಯಾಕೆಂತೆಂದರೆ, “ ನಿಮ್ಮಂತಹ ಸಾಧುಬ್ರಾಹ್ಮಣರಿಗೆ ಕೃಷ್ಣಾತಾಯಿ

ಸಾಧ್ವೀನೇ ಇದ್ದಿರಬೇಕು. ಅದನ್ನೆಲ್ಲ ಏನ ಮಾಡತೀರಿ? ಈ ಸೀರೆ ಒಯ್ದು ಕೊಡರಿ ಆಕೆಗೆ" ಅಂದರು.

**ರಾಮಣ್ಣ:**—(ಏನೂ ತಿಳಿಯದೆ ಅವನನ್ನು ದಿಟ್ಟಿಸಿ) ಹಳೆಯಗ್ರಂಥಕ್ಕೆ ಅರ್ಥ ಹಚ್ಚಲು ವೈದಿಕಬ್ರಾಹ್ಮಣರಿಗೆ ಯಾಕೆ ಬರುವದಿಲ್ಲ—ಎಂದು ನನಗೆ ದಿಗಿಲು ಇದ್ದಿತು ನೋಡಿ, ಆಚಾರ್ಯರೆ. ಈಗ ತಿಳಿಯಿತು.... ಹುಂ. ಹೊಟ್ಟೆಗೆ ಪರತಂತ್ರರಾದವರಿಗೆ ಸ್ವತಂತ್ರ ಬುದ್ಧಿ ಬರುವದು ಹೇಗೆ?.. ನಿಮ್ಮ ಮಾತಿನ ಅರ್ಥವಾದರೂ ನಿಮಗೆ ತಿಳಿಯುವದೆ?

**ಗೋಪಾ:**—ಮಹಾರಾಯಾ, ನನಗೇನು ತಿಳಿಯುವುದು ದೊಡ್ಡವರ ಮನೆಯ ಪೇಚುಗಳೆಲ್ಲ? ಯಾಕೆಂತೆಂದರೆ, ನನಗೇನೊ ಕೃಷ್ಣಾತಾಯಿ ಸಾಧ್ವಿಯೆ ಎಂದು ತೋರಿತು, ಹೇಳಿದೆ.

**ರಾಮಣ್ಣ:**—(ಸಂಶಯದಿಂದ) ಏನು?

**ಗೋಪಾ:**—(ಮುಂದೆ ಬಂದು ಮೆಲುದನಿಯಲ್ಲಿ) ಏನೂ ಇಲ್ಲ, ರಾಮಣ್ಣ. ಯಾಕೆಂತೆಂದರೆ, ನಮಗೆ ನಿಮಗೆ ಮಾಡುವದೇನು? ರಾಯರು ಹೇಳಿದರು, ಸುಂದರಮ್ಮ ಕೇಳಿದರು. ಆದರೂ— ಯಾಕೆಂತೆಂದರೆ ನೀನೇ ನೋಡು—ರಾಯರು ಕಾಣಿಸುವಷ್ಟು ವಯಸ್ಸಾದವರು ಅಲ್ಲ ಅಂತ ನನಗೆ ಮೊದಲಿನಿಂದಲೆ ತಿಳಿದಿತ್ತು. ನನ್ನಕಿಂತ—ಎಷ್ಟು ?— ೧೦-೧೧ ವರ್ಷಕ್ಕೆ ಚಿಕ್ಕವರು. ಯಾಕೆಂತೆಂದರೆ, ನಿಮ್ಮ ತಾಯಿಯನ್ನು ಕಳೆದುಕೊಂಡಾಗ. ನಾನೇ ಹೇಳಿದ್ದೆ ರಾಯರಿಗೆ ಎರಡನೆಯ ಮದಿವೆ ಮಾಡಿಕೊಳ್ಳಲಿಕ್ಕೆ ಹಹ . ರಾಯರು ಎಂದಿನಿಂದಲೂ ವಿನೋದದ ಸ್ವಭಾವದವರು.. (ತನ್ನಷ್ಟಕ್ಕೆ ನಗುತ್ತ) "ನಮಗೆ ಯಾಕೊ ಮದಿವೆ? ಗತಿ ಇಲ್ಲದ ಬ್ರಾಹ್ಮಣನಿಗೆ ಮದಿವೆ" ಅಂದರು.... ಯಾಕೆಂತೆಂದರೆ, ನನಗೆ ಆಗ ತಿಳಿದಿರಲಿಲ್ಲ ಅದರ ಅರ್ಥ.. ಹಹಹ.

**ರಾಮಣ್ಣ:**—(ಅಸಹ್ಯವೆನಿಸಿ) ಈಗ್ಗೆಯಾದರೂ ನಿಮಗೆ ತಿಳಿದಿದೆಯೆ ಇಲ್ಲವೆ ನನಗೆ ಸಂಶಯವೇ ಇದೆ. (ಅಣಕಿಸಿಂದ) ಮಾತಾಡಿದವರ ಬುದ್ಧಿಗೆ ತಕ್ಕ ಅರ್ಥ ಹಚ್ಚಬೇಕು, ತಿಳಿಯಿತೆ, ನಿಮ್ಮ ಬುದ್ಧಿಗೆ ತೋಚಿದ್ದಲ್ಲ?

**ಗೋಪಾ:—**( ನಗೆ ತಡೆದು ) ಎಲೆಲೆ ! ನನ್ನ ಮೇಲೆ ಹರಿಹಾಯು-ವದು ಏನಿದು ಅಂದೆ ! ಯಾಕೆಂತೆಂದರೆ ನನಗೇನು ತಿಳಿಯಬೇಕು ಇದೆಲ್ಲ ! ಬಡಬ್ರಾಹ್ಮಣನಿಗೆ ಸಂಸಾರ ಸುಖ ಸಿಕ್ಕೋದು—ಯಾಕೆಂತೆಂದರೆ ಮದಿವೆ ಆಗದೆಯೆ ಸಿಕ್ಕೋದೇ ಇಲ್ಲ. ಯಾಕೆಂತೆಂದರೆ, ಅನುಭವದ ಮಾತು ಇದು, ಬಡತನ ಇದು, ರಾಮಣ್ಣಾ . . ಹಹ.

**ರಾಮಣ್ಣ:—** ( ಸಿಟ್ಟಿನಿಂದ ) ಸಾಕುಮಾಡಿ ನಿಮ್ಮ ಹಲ್ಲುಕಿರಿಯುವದನ್ನು ! ಮಾಡಿದ ಪಾಪದ ಭಾರವನ್ನೆಲ್ಲ ದೇವರ ಮೇಲೆ ಹಾಕಿ, ಮಾಡಲು ಮನಸಿದ್ದು ಧೈರ್ಯವಿಲ್ಲದ ಪಾಪದ ಭಾರವನ್ನೆಲ್ಲ ಮಂದಿಯ ಮೇಲೆ ನೂಕುವಿರಲ್ಲವೆ ? . . ಪುರಾಣ-ಪುಣ್ಯಕಥೆಗಳನ್ನು ಹೊಗಳುವ ಬಾಯಿಯಿಂದಲೆ ಹೊಲಸು ಕಟ್ಟು-ಕತೆಗಳನ್ನು ಬೊಗಳುವಿರಲ್ಲವೆ ? ಎಚ್ಚರ, ಇನ್ನೊಮ್ಮೆ ಹೀಗೆ ಮಾತನಾಡಿದರೆ !

**ಗೋಪಾ:—** ( ಸಮಾಧಾನದಿಂದ ) ನಿನಗೆ ಸಿಟ್ಟು ಬರುವಂತಿದ್ದರೆ ನಾನೆಲ್ಲಿ **ಈ** ಸೀರೆ ಮುಟ್ಟಿಸಲಿಕ್ಕೆ ಒಪ್ಪಿಕೊಳ್ಳುತ್ತಿದ್ದೆ ! ಯಾಕೆಂತೆಂದರೆ, ನೋಡು ರಾಮಣ್ಣಾ, ನನ್ನದೇನು ದೋಷ ? ಹಾಗೆ ನೋಡಿದರೆ ಯಾರದೇನು ದೋಷ ? ಯಾಕೆಂತೆಂದರೆ, ಯಾರದೂ ಅಲ್ಲ. ಸಂಸಾರಮೋಹ ಯಾರಿಗೆ ಬಿಟ್ಟಿದೆ ? ಆದರೂ– ಪಾಪ !– ರಾಯರಿಗೆ ಇಂತಹ ತೊಂದರೆ ಇದೆ ಎನ್ನುವದು ಗೊತ್ತಿರಲಿಲ್ಲ ನನಗೆ. ಮೊದಲೇ ಹೇಳಿದ್ದರೆ– ಯಾಕೆಂತೆಂದರೆ— ಜಪ, ಅನುಷ್ಠಾನ ಏನಾದರೂ ಮಾಡಲಿಕ್ಕೆ ಬರುತ್ತಿತ್ತು.

**ರಾಮಣ್ಣ:—** ( ಎದ್ದು ತಿರಸ್ಕಾರದಿಂದ ) ಮೊದಲು ದೊರೆತ ಊಟ ಮಾಡಿರಿ, ಆ ಮೇಲೆ ಮುಂದಿನ ಊಟ ದೊರೆಯಲಿ ಎಂದು ಜಪ, ಅನುಷ್ಠಾನ ಮಾಡಿರಿ. ( ಒಳಗೆ ಹೊರಡುವನು ).

**ಗೋಪಾ:—** ( ಬಟ್ಟೆಯನ್ನು ತೆಗೆಯುತ್ತ ) ಅದೇ, ಅದೇ. ಆದರೂ ಭೂತಬಾಧಾ ಇದ್ದಲ್ಲಿ ಜಪ, ಅನುಷ್ಠಾನ ಮಾಡದೆಯೆ ಉಣ್ಣುವದು ಹೇಗೆ ? ಅದಕಾಗಿ—

**ರಾಮಣ್ಣ:— ( ಒಮ್ಮೆಲೆ ತಿರುಗಿನಿಂತು ) ಏ–ನ–ದು ?**

**ಗೋಪಾ:—** ( ಬಟ್ಟೆ ತೆಗೆಯುವದನ್ನು ತಡೆದು, ಆಶ್ಚರ್ಯ ತೋರಿಸಿ) ಛೆ, ನನಗೇನು ಗೊತ್ತು ಇದೆಲ್ಲ! ಯಾಕೆಂತೆಂದರೆ, ನೋಡಿದಿಯಿಲ್ಲೊ, ನಿನಗೆ ಕೂಡ ಗೊತ್ತಿಲ್ಲ. ಗೊತ್ತಿಲ್ಲದೆ- ಯಾಕೆಂತೆಂದರೆ— ಕೋಪಿಸುವದು ಒಳಿತಲ್ಲ .... ಕೇಳಿಕೊ, ರಾಮಣ್ಣ .... ರಾಯರು ಮದಿವೆ ಮಾಡಿಕೊಳ್ಳುವದಿಲ್ಲ ಅಂದರು- ಅದು ಸರಿ ಎಂದುಕೊಂಡೆ. ಯಾಕೆಂತೆಂದರೆ, ಗಂಡಸಮಗು ಇದ್ದಮೇಲೆ- ಅಂದರೆ ನಿನ್ನಂತಹ ಬುದ್ಧಿಶಾಲಿ ಮಗು ಇದ್ದಮೇಲೆ— ಎಲ್ಲ ಋಣ ತೀರಿದಂತೆ, ಎಂದುಕೊಂಡೆ. ( ಮುಂದೆ ಬಂದು ಮೆಲ್ಲಗೆ ) ಆದರೆ, ಪಾಪ! ಎರಡನೆಯ ಮದಿವೆ ಆದರೆ ಅವಳನ್ನು ಪೀಡಿಸುವೆ ಅಂತ ಮೊದಲನೆಯ ಹೆಂಡತಿ ಭೂತ ಆಗಿ ಹೇಳಿದರೆ—

**ರಾಮಣ್ಣ :—** ( ಕೋಪಾವೇಗವನ್ನು ತಡೆಯುತ್ತ ) ಎಲೊ, ತುಂಟ ಬ್ರಾಹ್ಮಣಾ, ನಿನ್ನ ನಾಲಗೆ ಎಂದರೆ ಆ ನಿನ್ನ ಕಾಡು ಮನಸ್ಸಿನಿಂದ ಹರಿಯುವ ನದಿ, ಆಗಿದೆಯಲ್ಲ,— ತೀರ್ಥವೆಂದು ಬೆಳೆಯುತ್ತ, ಕಿಪ್ಪೆಯನ್ನು ಬಳೆಯುತ್ತ ! ಗೊತ್ತಿಲ್ಲವೆ ನಿನಗೆ ಈ ಮನೆಯಲ್ಲಿ ಪ್ರವೇಶ ಹೇಗಾಯಿತೆಂಬುದು ? ನನ್ನ ತಂದೆಯ ಮನಸ್ಸು ನೋಯಿಸಬಾರದೆಂದು ನಿನಗೆ ಇಲ್ಲಿ ಕಾಲಿಡಲು ಬಿಟ್ಟಿರುವೆನಲ್ಲದೆ— ಇಲ್ಲವಾದರೆ—

( **ಹೊರಗಿನಿಂದ ಬಂದು** )

**ಗುರುಸಿದ್ಧ:—**( ಹೊರಗೆ ನೋಡುತ್ತ ) ಬರ್ರಿ, ಬರ್ರಿ, ಇದ್ದಾರ ಬರ್ರಿಪ್ಪಾ !

**ರಾಮಣ್ಣ :—** ( ಸಿಟ್ಟಿನಿಂದ ) ಯಾರೊ ?

**ಗುರುಸಿದ್ಧ:—**( ರಾಮಣ್ಣನಿಗೆ) ಈಟೊತ್ತಿಗೆ ಬರೋರು ಯಾರು?.. ನಮ್ಮ ಯಂಕಾಚಾರಿ.. ಒಳಗ ಊಟಕ್ಕ ಕೂತಾರ ರಾಯರು ಅಂದರ ಹೊರಗ ಧರಣೀ ಕೂಡತೀನಿ ಅಂದ ಮಹಾರಾಯ !

**ಗೋಪಾ:—**(ಬಟ್ಟೆಯನ್ನು ತೆಗೆದಿಟ್ಟು ಧೋತರವನ್ನು ಹೊದ್ದುಕೊಂಡು) ಯಾವ ವೆಂಕಾಚಾರಿ ?

**ಗುರುಸಿದ್ಧ:—**(ಇಬ್ಬರನ್ನೂ ನೋಡಿ) ಎಲ! ಹೀಂಗ್ಯಾಕ ಮಾಡತೀರಿ ಎಲ್ಲಾರೂ ಬೆಪ್ಪು ಬಡೆದ **ಹಾಗ!** ರಾಮಣ್ಣಾರಾಯರ ಕಡಿಗೆ ಬರೋ

ಯಂಕಾಚಾರಿ ಎಷ್ಟು ಜನ ಇದ್ದಾರ? ನಿಮ್ಮ ಹುಡುಗ, ನಿಮ್ಮ ಮಗ ಯಂಕಾಚಾರಿ.

**ಗೋಪಾ:**—ಅಲ್ಲಲ್ಲ ಕೇಳಿದೆ, ಯಾಕೆಂತೆಂದರೆ—

**ಗುರುಸಿದ್ಧ:**— ಇಲ್ಲ ಅಂತ ಯಾರಂದರು ? ಆ ಹುಡುಗನೂ ಹಾಗೇ. ಕೇಳದೆಯೆ ಬಿಡೋದೇ ಇಲ್ಲ. (ಹೊರಗೆ ನೋಡಿ) ಬರ್ರೀ ಯಪಾ! ಆ ಕೊಡೆ ಅಲ್ಲೇ ಇಡರಿ. (ರಾಮಣ್ಣನಿಗೆ) ನಾನು ಏನೇನೊ ಹೇಳಬೇಕು ಅನ್ನೋದರೊಳಗೆ ನಿಮ್ಮದೇ ದನಿ ಕೇಳಿಸಬೇಕೆ ಇದೇ ಕೋಣೆಯೊಳಗೆ ? ಇಲ್ಲಾ ಅಂದರ—

**ರಾಮಣ್ಣ:**—(ಸಾಕಾಗಿ) ಇರಲಿ ಬಿಡೊ.

**ಗುರುಸಿದ್ಧ:**— ಅಲ್ಲ, ಹೊತ್ತಿಲ್ಲದ ಹೊತ್ತಿಗೆ ಬರತಾರ ಅಂತ ಹೇಳಿದೆ. (ವೆಂಕಾಚಾರಿ ಬರುವನು) ಆ ಬಾಗಿಲ ಒಂದಿಷ್ಟು ನೂಕಿಬಿಡಿರಿ, ಒಳಗ ಬರೋವಾಗ—(ರಾಮಣ್ಣನ ಕಡೆಗೆ ನೋಡುತ್ತ ಮುಗುಳ್ನಗೆಯಿಂದ) ಮತ್ತ ಹಾಗೇ ಹೊರಗೂ ಹೋಗುವಾಗ. (ಹೋಗುವನು).

(ಗೋಪಾಲಾಚಾರ್ಯನು ತೆಕ್ಕೆಗೆ ಅತುಕೊಂಡು ಕೂಡ್ರುವನು)

**ರಾಮಣ್ಣ:**—ಯಾಕೆ, ವೆಂಕಾಚಾರೀ— ಅಂತಹದೇನು ಕೆಲಸ ಇಂತಹ ರಾತ್ರಿಯಲ್ಲಿ ?

**ಗೋಪಾ:**—(ವೈಭವೋನ್ಮತ್ತನಂತೆ)ರಾತ್ರಿಯಲ್ಲಿ ಅಂತೆ ! ಯಾಕೆಂ-ತೆಂದರೆ—ಮಾಡುವ ಕೆಲಸ ನಾಚಿಕೆಗೇಡಿ ; ಹಗಲು ಧೈರ್ಯ ಬೇಕಲ್ಲ!

**ವೆಂಕ:**—(ತಿರಸ್ಕಾರದಿಂದ ತಂದೆಗೆ) ಮಾತನಾಡಿಸದೆ ಮಾತನಾಡು-ವಂತಹ ನಾಚಿಕೆಗೇಡಿ ಕೆಲಸ ಮತ್ತೆ ಯಾವದು?— (ರಾಮಣ್ಣನಿಗೆ) ಅಗತ್ಯವಾದ ಕೆಲಸ, ರಾಮಣ್ಣನವರೆ, ನಾಳಿನ ದಿವಸ ಸಭೆಕೂಡಿಸ-ಬೇಕಾಗಿದೆ. ನೀವೇ, ಮಾತನಾಡಬೇಕು ಎಂದು ಎಲ್ಲರ ಹಟ.

**ರಾಮಣ್ಣ:**—ನಾಳೆ—ನಾಳೆ ಸಭೆಯೆ ?

**ವೆಂಕ:—**ಅಹುದು. ಈ ೪-೬ ದಿವಸ ಮನೆಯೊಳಗಿನ ಕೆಲಸವೆ ನಿಮಗೆ ಬಹಳ ಇದ್ದಿತೆಂದು ನಿಮಗೆ ಹೇಳಿರಲಿಲ್ಲ.— ಮತ್ತೊಂದು ಅತ್ಯಾಚಾರ ನಡೆದಿದೆ. ಅದರ ಖಂಡನೆ ಮಾಡಲೇ ಬೇಕಾಗಿದೆ.

**ರಾಮಣ್ಣ:—**( ಸಂಶಯದಿಂದ ) ಅದೇನು ?

**ವೆಂಕ:—**೫೪ ವರ್ಷದ ವೇದಪಾರಂಗತನೊಬ್ಬ ಒಂದು ಹುಡುಗೆಗೆ ಉರುಲು ಹಾಕಿ—

**ಗೋಪಾ:—** ( ಒಮ್ಮೆಲೆ ಅರ್ಧ ಎದ್ದು ) ಉರುಲು ? ಏನು ? ಯಾಕೆಂತೆಂದರೆ ಹತ್ಯೆ, ವಧ—

**ರಾಮಣ್ಣ:—**(ನಕ್ಕು) ಯಾವದಕ್ಕೆ ನೀವು ಮಂಗಲಸೂತ್ರ ಕಟ್ಟುವದು ಎನ್ನುವಿರೊ— ಅದಕ್ಕೆ ಬುದ್ಧಿಯು ಸಂಸ್ಕೃತದಲ್ಲಿ ಉರುಲು—ಸುತ್ತು ಎನ್ನುವದು.

**ಗೋಪಾ:—**( ಎದ್ದು ಕುಳಿತು ) ಅಯ್ಯೊ ! ಪಾಪ ! ಅನ್ಯಾಯ ಅದಲ್ಲ— ಯಾಕೆಂತೆಂದರೆ ಹೀಗೆ ಅಭದ್ರಶಬ್ದಗಳನ್ನು ನುಡಿಯುವದು—

**ವೆಂಕ:—** ( ನಡುವೆಯೆ ರಾಮಣ್ಣನಿಗೆ ) ಆ ವೇದಶಾಸ್ತ್ರಸಂಪನ್ನ ಶ್ಯಾಮಾಚಾರ್ಯ ಇರುವನಲ್ಲ—

**ರಾಮಣ್ಣ:—**ಯಾವ ಶ್ಯಾಮಾಚಾರ್ಯ ?

**ವೆಂಕ:—** ನಿಮಗೆ ಗೊತ್ತಿರಲಿಕ್ಕಿಲ್ಲ ಒಂದು ವೇಳೆ. ಅವನು ಯಾವಾಗಲೂ ಬರಿಮೈಯ್ಯಿಂದ ತಿರುಗುವ. ಅದರಲ್ಲಿ ಬ್ರಾಹ್ಮಣ್ಯದ ಸುಳಿಯೆ ಕಾಣುವದಿಲ್ಲ— ಮಾಸಿದ ಆ ಧಾರದ ಸುಳಿಯನ್ನು ಬಿಟ್ಟು.. ೮-೧೦ ದಿವಸಗಳಲ್ಲಿ ಅವನ ಮದಿವೆ—ಮದಿವೆ ಅಂತ ಅವರ ಹೆಸರು ಹುಡುಗೆಗೆ ೧೨ ವರ್ಷ.

**ಗೋಪಾ:—**( ಆಶ್ಚರ್ಯದಿಂದ ) ೧೨ ವರ್ಷ ! ಅನ್ಯಾಯ, ಇದು. ಯಾಕೆಂತೆಂದರೆ ೧೨ ವರ್ಷಕ್ಕೆ ಮದಿವೆ ಎಂದರೆ—

**ರಾಮಣ್ಣ:—**ಅನ್ಯಾಯವೆಂದು ತೋರುವದಲ್ಲವೆ ನಿಮಗೆ ಕೂಡ? . .

**ಗೋಪಾ:—** ಹಾಗಲ್ಲ. . ಯಾಕೆಂತೆಂದರೆ— ಅಷ್ಟವರ್ಷಾ ಭವೇತ್ ಕನ್ಯಾ—

**ರಾಮಣ್ಣ:—** ಅಂದರೆ ಹೆಂಗಸರ ಆಯುಷ್ಯ ಎಂಟು ವರ್ಷ ಎಂದು ಅರ್ಥವಲ್ಲವೆ?. . ಅನ್ಯಾಯವಂತೆ!. . ನಿಜ. . ಆದರೆ ಹುಡುಗೆ ಬೆಳೆಯುವದು ಅನ್ಯಾಯವೆ? ಆ ಹುಡುಗೆಯ ತಂದೆ ಬೆಳೆಯುವದೇ ಅನ್ಯಾಯವಲ್ಲವೆ? ಆ ಹುಡುಗೆಗೆ ತಂದೆಯು ಸರಿಸಮಾನನಾದ ಈ ವೇದಶಾಸ್ತ್ರಸಂಪನ್ನನು ಇಂತಹ ಮದಿವೆಯಾಗಲು ಉಳಿಯುವದೇ ಅನ್ಯಾಯವಲ್ಲವೆ? (ವೆಂಕಾಚಾರಿಗೆ) ಸರಿ. ಸಭೆ ಎಷ್ಟು ಗಂಟೆಗೆ?

**ಗೋಪಾ:—** ಅಲ್ಲ, ಮದಿವೆಗೆ ವಾಜನಿಶ್ಚಯ ಮಾಡುವದು ಎಂದು ಕೇಳಿದ್ದೆ. ಯಾಕೆಂತೆಂದರೆ ಸುಧಾರಿಸಿದವರು ಸಭೆಯೊಳಗೆ ಮಾಡಲಿ ತಮ್ಮ ಮದಿವೆ. ಪಾಪ! ಬ್ರಾಹ್ಮಣನ ಯಾಕೆ ಸಭೆಯಲ್ಲಿ— ಯಾಕೆಂತೆಂದರೆ, ಇಲ್ಲದ ಧರ್ಮತೊಂದರೆ ಇದು, ರಾಮಣ್ಣಾ?

**ರಾಮಣ್ಣ:—** ಹುಂ. . ನಿಮ್ಮ ಧರ್ಮವೆ ವ್ಯವಹಾರಕ್ಕೆ ತೊಂದರೆಯಾಗಿದೆ. . ವಾಜನಿಶ್ಚಯ. . ಅಲ್ಲವೆ? ಈ ಸಭೆ ಕೂಡಿಸುವದು ಅದಕ್ಕಾಗಿಯೆ. ಈ ಸಭೆಯೊಳಗೆ ನಿಶ್ಚಯವನ್ನೆ ಕೈಕೊಳ್ಳಬೇಕಾಗಿದೆ. ಇಂತಹ ಮದಿವೆ ಎಂದರೆ— ಗಂಡಸರಂತೆಯೆ ಹೆಂಗಸರನ್ನೂ ಹುಟ್ಟಿಸಿದ ಆ ನಿಮ್ಮ ದೇವನಿಗೆ ದ್ರೋಹ; ಅದನ್ನು ಮುರಿಯಲೇಬೇಕು ಎಂದು ನಿಶ್ಚಯವನ್ನು ಕೈಕೊಳ್ಳಬೇಕಾಗಿದೆ.

**ವೆಂಕ:—** (ತಂದೆಯ ಕಡೆಗೆ ನೋಡುತ್ತ) ಅಂತಹ ಮುದಿಗೂಬೆಗೆ ತಕ್ಕ ಶಾಸ್ತಿ ಆಗಲೇಬೇಕು ಎಂಬ ನಿಶ್ಚಯವನ್ನು—

**ರಾಮಣ್ಣ:—** (ಅಣಕಿನ ನಗೆಯಿಂದ) ಮುದಿಗೂಬೆ! ಗೂಬೆಗೆ ಅವನನ್ನು ಹೋಲಿಸುವದೆಂದರೆ ಅದು ಗೂಬೆಗೆ ಅವಮಾನ. ರಾತ್ರಿಯಾದರೂ ಕಣ್ಣು ಕಾಣುವದು ಗೂಬೆಗೆ. ಆದರೆ ಹಗಲು ರಾತ್ರಿ ಎರಡು ಹೊತ್ತೂ ಕಣ್ಣು ಕಾಣದ ಈ— ಈ—

**ಗೋಪಾ:—** (ಒಮ್ಮೆಲೆ ಎದ್ದು) ಛೆ, ಇದು ಸರಿಯಾದ ಮಾತಲ್ಲ. ಯಾಕೆಂತೆಂದರೆ, ಎರಡನೆಯವರಿಗೆ ದೋಷ ಕೊಡುವದು! ಅವರು ನಿಮ್ಮ

ಸಭೆಯೊಳಗೆ ಬಂದು ಮಾತನಾಡುವದಿಲ್ಲ ಎಂಬ ಧೈರ್ಯದಿಂದ ! ಇದು ಹೇಡಿತನ ! ಯಾಕೆಂತೆಂದರೆ— ಅಪರಾಧ— ಯಾಕೆಂತೆಂದರೆ ಮಂದಿಯ ಮದಿವೆಯ ಮಂಟಪ ಕೆಡಿಸುವದು ರಾಕ್ಷಸರ ಕೆಲಸ— ಇದು— (ಸಿಟ್ಟಿನಿಂದ ಮಗನಿಗೆ) ವೆಂಕ್ಯಾ, ನಿನಗ ಹೇಳುವೆ. ನೀನು— ಯಾಕೆಂತೆಂದರೆ—ನೀನು ಮನೆಬಿಟ್ಟು ಕದಲಬೇಡ ನೋಡು.

**ವೆಂಕ:—** (ತಿರಸ್ಕಾರದ ನಗೆಯಿಂದ) ಯಾರ ಮನೆ?

**ಗೋಪಾ:—** (ಹಟದಿಂದ) ನಮ್ಮ ಮನೆ. ಯಾಕೆಂತೆಂದರೆ, ನೀನು ಮನೆ ಬಿಟ್ಟಿದ್ದರೂ ನನ್ನ ಹುಡುಗ, ನನ್ನ— ಯಾಕೆಂತೆಂದರೆ— ನಾನು ನಿನ್ನ ತಂದೆ.

**ವೆಂಕ:—** (ಸಿಟ್ಟಿನಿಂದ) ಓಹೊ! ಎಷ್ಟು ಸಲ ಹೇಳಿರುವೆ ನಿಮಗೆ ನನಗೆ ತಂದೆಯಕಿಂತಲೂ ತತ್ವವೇ ಹೆಚ್ಚಿನದು ಎಂದು? ಮನೆಯಂತೆ! ತಂದೆಯಂತೆ! ಯಾವ ಮನೆಯಲ್ಲಿ ಬುದ್ಧಿ ಕಳೆದ ಮುಪ್ಪಿನ ಮುದುಕನು ಅದೇ ಬುದ್ಧಿ ಮೊಳೆಯುತ್ತಿರುವ ಹುಡುಗೆಯನ್ನು ತಂದಿಟ್ಟು—

**ಗೋಪಾ:—** (ಸಿಟ್ಟಿನಿಂದ) ಎಲಲ! ನೀಚ ನೀನು! ಯಾಕೆಂತೆಂದರೆ, ಹುಡುಗೆ ಅಂತೆ! ಅವಳು ನಿನಗೆ ತಾಯಿ ಈಗ!

**ವೆಂಕ:—** ನನ್ನ ತಂದೆಯೆಂದು ಹೇಳಿಕೊಳ್ಳುವ ನಿಮ್ಮ—

**ಗೋಪಾ:—** (ಒಮ್ಮೆಲೆ) —ನನ್ನ ಮದಿವೆಯ ಹೆಂಡತಿ. ಎಲೊ ಪಿಶಾಚೀ, ಯಾಕೆಂತೆಂದರೆ ಅವಳು ನನ್ನ ಮದಿವೆಯ— ಶಾಸ್ತ್ರಸಮ್ಮತ ಮದಿವೆಯ ಹೆಂಡತಿ. ಕೇಳು, ನಿಮ್ಮ ರಾಮಣ್ಣನನ್ನೆ; ಮದಿವೆ ಇಲ್ಲದೆ ಮನೆಮಾಡಿಕೊಂಡು ಇರುವಂತಹ ನೀಚ ತಂದೆ ನಾನಲ್ಲ. ಯಾಕೆಂತೆಂದರೆ—

**ವೆಂಕ:—** (ನಡುವೆಯೆ) ಅದಕ್ಕಿಂತಲೂ ಹೆಚ್ಚಿನ ನೀಚತನ ನಿಮ್ಮದು! (ಅಣಕಿಸಿ) ಯಾ-ಕೆಂ-ತೆಂ-ದ-ರೆ ದೇವರ ಸಾಕ್ಷ್ಯ ಇಡುವಿರಿ.. ಹುಂ.. (ಹೊರಡುವನು, ರಾಮಣ್ಣನಿಗೆ) ನಾಳೆ ಸಾಯಂಕಾಲಕ್ಕೆ.

**ರಾಮಣ್ಣ:—** ವೆಂಕಾಚಾರೀ, ತಡೆ. ( ವೆಂಕಾಚಾರಿಯು ತಿರುಗಿ ನಿಲ್ಲು–ವನು ) ( ವಿಚಾರಿಸುತ್ತ ) ನಾನು.. ಉಹುಂ.. ಆಗಲಿ, ನಾಳೆ ಬರುವೆ.. ತಡೆ.. ಊಟವಾಗಿದೆಯೇನು ?

**ವೆಂಕ:—** ಇಲ್ಲ.— ಆದರೆ ನನಗೆ ಅವಸರ ಇದೆ. (ಹೊರಡುವನು)

**ರಾಮಣ್ಣ:—** ಅದಕ್ಕೆಷ್ಟು ಹೊತ್ತು ?

**ವೆಂಕ:—** (ಬಾಗಿಲು ತೆರೆದು, ತಿರುಗಿ ನಿಂತು ) ಇಲ್ಲಿಲ್ಲ. ಸಭೆ ಮುಗಿದ ಕೂಡಲೆ " ಈಗಿಂದೀಗ ಈ ಪತ್ರ ಕೃಷ್ಣಾತಾಯಿಗೆ ಮುಟ್ಟಿಸು " ಅಂತ ಹೇಳಿ ಕೊಟ್ಟರು ನಿಮ್ಮ ಶೀನಣ್ಣರಾಯರು. ( ನಗೆಯಿಂದ ) ಆ ಕೆಲಸ ಮಾಡದೆಯೆ ರಾಯರನ್ನು ಎದುರಿಸುವಂತಿಲ್ಲ. ( ಹೋಗುವನು ).

( ಗೋಪಾಲಾಚಾರ್ಯನು '' ಹುಂ '' ಎಂದು ರಾಮಣ್ಣನನ್ನು ನೋಡುವನು. ರಾಮಣ್ಣನು ತಿರಸ್ಕಾರದಿಂದ ಅವನನ್ನು ನೋಡುವನು. ಒಳಗೆ ಶೀನಣ್ಣನ ಕೂಗಾಟ. ' ಗುರುಸಿದ್ಧಾ, ಯಾರು ಬಂದಿರುವರೊ ? ' '' ಗೋಪಾಲಾಚಾರ್ರೆ— '' '' ಥೆ, ಯಾರು ಇದ್ದಾರೊ ಇಲ್ಲವೊ ಮನೆಯೊಳಗೆ '' ಮುಂತಾಗಿ)

**ಗೋಪಾ:—** ಬಂದೆ. ಬಂದೆ.. ಅಯ್ಯೊ, ಎಷ್ಟು ವಿಲಂಬವಾಯಿ–ತಲ್ಲ ! ಯಾಕೆಂತೆಂದರೆ, ರಾಯರಿಗೆ ಕೂಗುವ ಸಮಾಧಾನ ಕೂಡ ಇಲ್ಲ.. ಬಂದೆ, ಬಂದೆ. ( ಎಂದು ಒಳಕ್ಕೆ ಹೊರಡುವನು. ರಾಮಣ್ಣನು ಕದಲದೆಯೆ ನಿಂತದ್ದನ್ನು ನೋಡಿ ಒಮ್ಮೆಲೆ ತಡೆಯುವನು— ಇಷ್ಟರಲ್ಲಿ ಶೀನಣ್ಣನು ಬರುವನು. ಬರಿಯ ತಲೆ. ಮೈಮೇಲೆ ಧೋತರ ಹೊದ್ದುಕೊಂಡಿರುವನು.

**ಶೀನಣ್ಣ:—**( ಅಬ್ಬರಿಸುತ್ತ ) ನಿಂತಲ್ಲಿಯೆ ' ಬಂದೆ–ಬಂದೆ ' ಅಂದರೆ—

**ಗೋಪಾ:—** ( ಸಾವರಿಸುತ್ತ ) ಇಲ್ಲಿಲ್ಲ. ಎದ್ದೇಬಿಟ್ಟೆ ನೋಡಿರಿ. ರಾಮಣ್ಣಗೆ ಇನ್ನೂ ಅವಕಾಶ ಇದ್ದಿತೂಂತ— ಯಾಕೆಂತೆಂದರೆ ಯಾರೋ ಕೆಲಸಕ್ಕೆ ಬಂದಿದ್ದರು ಅವನ ಕಡೆಗೆ. ಅದಕ್ಕೆ—

**ಶೀನಣ್ಣ:—** ( ಬೇಜಾರದಿಂದ ) ಯಾರು ಬಂದಿದ್ದರು ? ಏನು ಕೆಲಸ ? ( ರಾಮಣ್ಣನು ಪಿಟ್ಟೆನ್ನುವದಿಲ್ಲವೆಂಬುದನ್ನು ನೋಡಿ, ಹುತ್ತಿಷ್ಟು ಕೆರಳಿ) ನೀವೇಳಬಾರದಾಗಿತ್ತೆ ? ನಿಮಗೇನಾಗಿತ್ತು ? .... ಥೆ, ಮನೆಗೆ ಯಾರು

ಬರುವರು, ಯಾರು ಹೋಗುವರು— ತಾಳಮೇಳವೆ ಇಲ್ಲ— ತಿಳಿಯೋದೇ ಇಲ್ಲ.... ಥೂ, ಹೊರಗೆ ತ್ರಾಸ, ಒಳಗೆ ತ್ರಾಸ!

**ಗೋಪಾ:—** ( ನೊಂದುಕೊಂಡು ) ಬಂದೆ- ರಾಯರೆ, ಬಂದೆ, ಇನ್ನೊಂದು- ಒಂದೇ ನಿಮಿಷ. ಯಾಕೆಂತೆಂದರೆ—

**ಶೀನಣ್ಣ:—**( ಸಿಟ್ಟಿನಿಂದ ) ನಿಮಗೆ ಊಟಕ್ಕೆ ಏಳಲಿಕ್ಕೂ ಆಧಾರ ಬೇಕೇನು ?

**ಗೋಪಾ:—**ಅಲ್ಲಲ್ಲ. ಆಚಮನ ಅಂದೆ. ಇಲ್ಲಿಯೆ ಮುಗಿಸಿಬಿಡುವೆ— ( ಲಗಬಗೆಯಿಂದ, ಹೊರಡುವನೇನೊ ಎನ್ನುವಂತೆಯೆ ) ಕೇಶವಾಯ ನಮಃ, ನಾರಾಯಣಾಯ ನಮಃ, ( ರಾಮಣ್ಣನು ಸಿಟ್ಟುತಡೆಯಲು ಯತ್ನಿಸುವ **ತಂದೆ** ಯನ್ನೂ ಹೌಹಾರಿದಂತಿದ್ದ **ಗೋಪಾಲಾಚಾರ್ಯನನ್ನೂ ನೋಡಿ** ಒಮ್ಮೆಲೆ **ತಿರಸ್ಕಾರ** ವನ್ನು ವ್ಯಕ್ತಪಡಿಸುತ್ತ ಗಟ್ಟಿಯಾಗಿ ನಗುವನು. ಗೋಪಾಲಾಚಾರ್ಯನು ಅವನನ್ನು ಸಿಟ್ಟಿನಿಂದ ನೋಡಿ, ಗಟ್ಟಿಯಾಗಿ ಹಟದಿಂದ ) ಮಾ-ಧ-ವಾ-ಯ-ನ-ಮಃ- ಗೋ—

**ಶೀನಣ್ಣ:—** ( ಒಪರಿ ) ಗೋವಿಂದಾ— ನಾರಾಯಣಾ! ಊಟದ ಹೊತ್ತಿಗೆಯೆ ಬಂದು ಸೇರುವರು ಮನೆಯಲ್ಲಿ .. ಛೆ, ಮನೆ ತುಂಬ ಗಲಾಟೆ. ಹೊರಗೆ ಬಂದರೆ ಇವರ ಕೂಗಾಟ! ಒಳಗೆ ಹೋದರೆ ಆ ಹಾಳು ಕೂಸಿನ ರಂಬಾಟ! ( ಆಣಕಿಸಿ ) ಗೋವಿಂದಾ, ನಾರಾಯಣಾ, ಹಾಳಾಗಿ ಹೋಗಬಾರದೆ—

**ಗೋಪಾ:—** ( ತಡೆದು ) ಛೆ, ಛೆ, ರಾಯರೆ, ನನ್ನ ತಪ್ಪು. ಯಾಕೆಂ-ತೆಂದರೆ, ಪಾಪ ! ಕೂಸಿನದೇನು—

**ಶೀನಣ್ಣ:—** ( ತ್ವೇಷದಿಂದ ) ಯಾರದೇನು ? ನನ್ನದೆ ತಪ್ಪು— ದುಡಿದು ತಿನ್ನಬೇಕನ್ನೋದು. ಬೇಡಾ ಅಂದರೂ ಬಂದವರ ಬೊಬ್ಬೆ ಕೇಳುವ ಸಮಾಧಾನ ಇಲ್ಲವಲ್ಲ ನನ್ನಲ್ಲಿ !

**ಗೋಪಾ:—** ( ಒಳಗೆ ಹೊರಡುತ್ತ ) ಅದೇ, ಅದೇ. ನನ್ನ ತಪ್ಪು, ರಾಯರೆ. ಯಾಕೆಂತೆಂದರೆ, ಮಕ್ಕಳು ಅಂದರೆ ದೇವರೇ ಕಳಿಸಿಕೊಟ್ಟ—

**ಶೀನಣ್ಣ**:— ಅಯ್ಯೋ! ಮೊದಲು ಜೀವದಿಂದಿರಲಿಕ್ಕೆ ಅನ್ನ ಕೊಟ್ಟಾನೆ ದೇವರು, ತಿನ್ನಬಾರದೆ? ಕೈಯು ತುತ್ತು ಬಾಯಿಗೆ ಬರಗೊಡುವದಿಲ್ಲ. ಈ ಬ್ರಾಹ್ಮಣರೂ ಹಾಗೆಯೆ, ಈ ಕೂಸೂ ಹಾಗೆಯೆ! ನಡೆಯಿರಿ ಒಮ್ಮೆ ಒಳಗೆ ಯಾರಿಗೆ ಬೇಕಾಗಿತ್ತೊ ?

**ಗೋಪಾ**:— ( ತಿರುಗಿನಿಂತು ) ಬೇಡ ಅಂದರೆ ಬಿಟ್ಟೀತು ಹೇಗೆ, ರಾಯರೆ ? ಯಾಕೆಂತೆಂದರೆ (ಮೇಲೆ ನೋಡಿ) ಆತ ತಾನಾಗಿಯೆ ಕೊಡೋ ಕಾಲದಲ್ಲಿ ಕೈನೀಡದಿದ್ದರೆ—

**ಶೀನಣ್ಣ**:— (ತಡೆಯದ ಬೇಜಾರದಿಂದ) ಕೈನೀಡುವೆ, ಕೈನೀಡುವೆ. ಆ-ಯಿ-ತೇ? ಹುಂ. ಒಮ್ಮೆ ಕಯ್ಯೊಳಗೆ ಸಿಕ್ಕ ಮೇಲೆ ಅದನ್ನು ಹಿಂಡಿ ಹಿಚುಕುವೆ—

( " ಅಯ್ಯೊ, ಶೀನಣ್ಣಾ, ರಾಮಣ್ಣಾ, ಕೂಸು-ಕೂಸು " ಎಂದು ಸುಂದರಮ್ಮನು ಒಳಗೆ ಕೂಗುವಳು )ಕೂಸು-ಕೂಸು ! ಮುದಿಗೂಸಿನಂತೆ ಇವಳೂ ಕಿರಚು-ವಳು! ಛೆ!

**ರಾಮಣ್ಣ**:—( ಒಮ್ಮೆಲೆ ಮುಂದೆ ಬಂದು ) ಏನು— ಬಂದೆ—

**ಸುಂದರಮ್ಮ**:— (ಗಾಬರಿಯಿಂದ ಬಂದು ರಾಮಣ್ಣನ ತೆಕ್ಕೆ ಬಿದ್ದು) ಅಯ್ಯೊ, ಕೂಸಿನ ಕುತ್ತಿಗೆ ಹಿಚಕಿದಳಯ್ಯೋ— ಉಳಿಸಿರಿ ನನ್ನ ಕೂಸಿನ್ನ—

**ಶೀನಣ್ಣ**:—(ಬೆಪ್ಪಾಗಿ) ಎಲೆಲೆ ಇದೇನು!.. ಎ....ಛೆ ( ಒಳಗೆ-ಓಡುವನು ).

( ರಾಮಣ್ಣನು ಸುಂದರಮ್ಮನ ಭುಜದ ಮೇಲೆ ತಲೆ ಚಲ್ಲುವನು. ಒಳಗಿನಿಂದ ಗುಂಡುಸಿದ್ಧ ಬರುವನು. ರಾಮಣ್ಣನ ಮೈನಡಗಿಸುವ ಒಂದು ಬಿಕ್ಕು )

( ತೆರೆ )

---

# ಎರಡನೆಯ ಅಂಕ

( ಮರುದಿವಸ ಮುಂಜಾವಿನ ಒಂದು ತಾಸು ಹೊತ್ತೇರಿದೆ. 'ಸಂಸ್ಥಾನಿಕ' ಶೀನಣ್ಣನ ಮನೆಯ ಹಿತ್ತಲದಲ್ಲಿ. ಎದುರಿನಲ್ಲಿ ಮನೆಯಿಂದ ಬರುವ ಬಾಗಿಲು. ಬಾಗಿಲಿನಿಂದ ಹಿತ್ತಲದಲ್ಲಿ ಬರುವಾಗ ಬಲಬದಿಗೆ ಒಂದು ವೃಂದಾವನ. ತುಲಸೀಗಿಡವು ಕೈಗೆ ಎಲ್ಲರಿಗೂ ನಿಲುಕುವ ಸದುದ್ದೇಶದಿಂದಲೊ ಏನೊ ವೃಂದಾವನದ ತಳಹದಿಗೆ ಒಂದು ಹರವಾದ ಕಟ್ಟೆ. ತೆರೆಯು ಮೇಲಕ್ಕೇಳುವಾಗ ಬ್ರಾಹ್ಮಣನೊಬ್ಬನು ಪ್ರೇಕ್ಷಕರ ಕಡೆ ಬೆನ್ನುಮಾಡಿ ಕಟ್ಟೆಯ ಕಡೆ ನಿಂತು ಏನನ್ನೊ ಗೊಣಗುಟ್ಟುತ್ತ ತುಲಸೀಪತ್ರಗಳನ್ನು ಆಯ್ದುಕೊಳ್ಳುತ್ತಿರುವನು. "ವಿಷ್ಣುಪತ್ನಿ ನಮಸ್ತುಭ್ಯಂ".... ಕೈಯನ್ನು ಉಟ್ಟ ಧೋತರಕ್ಕೆ ಒರೆಸಿಕೊಂಡು ಹೊದ್ದುಕೊಂಡ ಧೋತರವನ್ನು ಸರಿಮಾಡಿಕೊಂಡು ಏನನ್ನೊ ತಪ್ಪಿಸಿಕೊಳ್ಳುವವನಂತೆ ಕೈಯಿಂದ ಹೆಚ್ಚು ಜಾಗ್ರತೆಯಾಗಿ ಪತ್ರಗಳನ್ನು ಆಯ್ದುಕೊಳ್ಳುವನು. "ವಿ-ಷ್ಣು-ದೇ-ವಿ-ನ-ಮ-ಸ್ತು-ಭ್ಯಂ" .. ಒಮ್ಮೆಲೆ ಬೇಜಾರದಿಂದ "ಉಶ್" ಎಂದು ಇಳಿಯುವನು.... ಮುಖದಲ್ಲಿ ಬ್ರಹ್ಮತೇಜಸ್ಸು ಕಾಣುವದಿಲ್ಲವೇನೊ ನಿಜ. ಆದಕ್ಕೆ ಪ್ರತಿಯಾಗಿ ನಳನಳಿಸುವ ಮುದ್ರೆಯ ಚಿನ್ಹಗಳು ಹೇರಳವಾಗಿ ಕಾಣುವವು. )

**ಬ್ರಾಹ್ಮಣ:—** (ಕೈಯನ್ನು ಮತ್ತೆ ಒರೆಸಿಕೊಳ್ಳುತ್ತ) ".... ಮಸ್ತವೇ" ....ಪುಣ್ಯಾತ್ಮರು ತುಲಸೀಗಿಡಕ್ಕೆ ನೀರನಾದರೂ ಹಣಿಸತಾರೊ ಇಲ್ಲವೊ! ....ಇರುವೆ ಅಂದರೆ ಮುತ್ತಿಹೋಗಿವೆ. ..ಒಂದು ಕಡೆ ಇರುವೆ ಚುಟ್ ಅನ್ನೋದರೊಳಗೆ ಒಂದು ಕಡೆ ಮುಳ್ಳು ಚಟ್ ಎಂದು ಚುಚ್ಚುವದು.... ಮಂದಿ ಬರಬಾರದೂಂತ ಮುಳ್ಳು ನೆಟ್ಟಿರುವರೇನೊ ಸುತ್ತುಮುತ್ತು!.. ದೊಡ್ಡವರ ಮನೆಯ ಕೆಲಸ.... ಎಲ್ಲಿ ನೋಡಿದಲ್ಲಿ ಮುಳ್ಳು.. ಹುಂ.. (ಎಂದು ಎಡಬಲದಿಂದ ಹೊರಟು ಮುಂದೆ ನೋಡಿ ಮುಗುಳ್ನಗೆಯಿಂದ) ನಮೋನಮಃ.. ಎದ್ದಿರಾ?

( ಕೈಯಲ್ಲಿ ತಾಮ್ರದ ತಂಬಿಗೆ, ತಾಮ್ರದ ಪಾತ್ರೆ ಹಿಡಿದು ಗೋಪಾಲಾಚಾರ್ಯನು ಬರುವನು. )

**ಗೋಪಾ:—** (ಮುಗುಳ್ನಗೆ ಮುಚ್ಚಿಸುತ್ತ) ತಾವೂ ಎದ್ದ ಹಾಗೆಯೆ

ಕಾಣಿಸತದೆ. ಯಾಕೆಂತೆಂದರೆ ಮುಖದಲ್ಲಿ ಮುದ್ರಾ ಎದ್ದು ಕಾಣಿಸು-ವದು.... ಸ್ನಾನ, ಉಪಚಾರ—

**ಬ್ರಾಹ್ಮಣ:**— (ಸ್ನೇಹದ ಆವೇಶದಿಂದ) ಎಲ್ಲಿಯದೊ, ಗೋಪಾಲಾ? ಮುಖದಲ್ಲಿಯ ಮುದ್ರಾ ಚಿಹ್ನ ಅಲ್ಲವೆ? ಒಂದು ಕಡೆ ಶಂಖ, ಒಂದು ಕಡೆ ಚಕ್ರ.

**ಗೋಪಾ:**— (ಏನೊ ರಹಸ್ಯವಿದೆ ಎಂಬ ಗಾಂಭೀರ್ಯದಿಂದ) ಇದೇನು ಹೊಸತಾಗಿ ತೆಗೆದೆಯೊ, ಪದ್ಮನಾಭಾಚಾರಿ?.. ಯಾಕೆಂತೆಂದರೆ, ವಾಚ-ಸ್ಪತಿ ಹಾಗೆ ನೀನು.. ಏನಾದರೊಂದು ಇಲ್ಲದ ಅರ್ಥ ಇಟ್ಟುಕೊಂಡು ಮಾತನಾಡುವೆ.

**ಪದ್ಮನಾಭ:** — (ದೈನ್ಯದ ಸೋಗಿನಿಂದ) ಇಲ್ಲದ್ದೇನೊ ಅಹುದು, ಗೋಪಾಲಾ. ಅದಕ್ಕೆಯೆ ಹೇಳಿದೆ. ಊಟಕ್ಕೆ ಶಂಖ ಅಂತ ಒಂದು ಕಡೆ ಶಂಖಮುದ್ರಾ, ಊಟ ಇಲ್ಲದ್ದಕ್ಕೆ ತಲೆ ತಿರುಗುವದೊಂತ— ಚಕ್ರಂ ಭ್ರಮತಿ ಮಸ್ತಕೇ— ಒಂದು ಕಡೆ ಚಕ್ರಮುದ್ರಾ.. (ಗೋ. ಸು ನಗುವನು) ಏನೊ, ನಿಮ್ಮ ಪುಣ್ಯಾದಿಂದ ಇಂದಿನ ಪ್ರಾತಃಕಾಲದಲ್ಲಿ ಶಿಶುಭೋಜನ ಸಿಕ್ಕಿತು.

**ಗೋಪಾ:**— (ಆಶ್ಚರ್ಯದಿಂದ) ಶಿಶುಭೋಜನ! ಇದೇನೊ ಮತ್ತೆ-

**ಪದ್ಮನಾಭ:**— (ಗಂಭೀರವಾಗಿ) ಅದು. ಶ್ರೀಕೃಷ್ಣನ ಬಾಲ್ಯಲೀಲಾ.... ಈ ನಿಮ್ಮ ತುಲಸೀಗಿಡಕ್ಕೆ ಕೈಹಾಕಿದಾಗೊಮ್ಮೆ ಮುಳ್ಳು ಚುಚ್ಚುತ್ತಿತ್ತು, ಮುಳ್ಳು ಚುಚ್ಚಿದಾಗೊಮ್ಮೆ ಬಾಯೊಳಗೆ ಬೊಟ್ಟು ಇಡುತ್ತಿದೆ. (ಕೂಸಿನಂತೆ ಬೊಟ್ಟು ತಿನ್ನುತ್ತ) ಇದು ಶಿಶುಭೋಜನ.

**ಗೋಪಾ:**— (ಆಳವಾಗಿ ಉಸುರ್ಗರೆದು) ಅಯ್ಯೋ, ಮಹಾರಾಯಾ! ನನ್ನ ಹೆದರಿಸಿಬಿಟ್ಟೆ ನೋಡು. ಯಾಕೆಂತೆಂದರೆ ಶಿಶು—

**ಪದ್ಮನಾಭ:**— ಮನೆಯೊಳಗೆ ಕೂಸಿನ ವಿಷಯ ಮಾತನಾಡಿದರೆ ಹೆದರುವಿ. ಆದರೆ ಹೊರಗೆ ಯಾಕೊ?—

**ಗೋಪಾ:**— (ನಡುವೆಯೆ ಸಿಟ್ಟಿನವನಂತೆ) ಹಾಗಲ್ಲೊ! ಯಾಕೆಂತೆಂ-ದರೆ— ಮಕ್ಕಳಾಗೋದಿಲ್ಲಾಂತ ಮನೆಯಾಕೆ ನನ್ನ ಮೇಲೆ ಕೋಪಿಸುವಳು

ಎಂದು ಆ ಮಾತಿಗೆ ನಾನು ಹೆದರುವೇಂತೆ ತಿಳಿಯಬೇಡ.... ಈಗ ನೋಡು.. ಯಾಕೆಂತೆಂದರೆ— ನಮ್ಮ ರಾಯರ ಮಾತಿನಲ್ಲಿ ನನ್ನ ವಿಶ್ವಾಸ· ನನ್ನದೇ ಯಾಕೆ? ಯಾಕೆಂತೆಂದರೆ ಎಲ್ಲರದೂ ವಿಶ್ವಾಸ. ಅವರ ಬುದ್ಧಿಯೆ ಅಷ್ಟೊಂದು ಮಿಗಿಲು. ಎಷ್ಟಾದರೂ— ನೋಡು, ಯಾಕೆಂತೆಂದರೆ— ನಮ್ಮ ನಿಮ್ಮ ವಿದ್ಯಾ ಎಲ್ಲಿಗೆ ಮುಟ್ಟಿಸುವದು? (ಕಂಠದಿಂದ ಹೊಟ್ಟೆಯವರೆಗೆ ಕೈತೋರಿಸಿ) ಇಲ್ಲಿಗೆಯೆ ಅಹುದಲ್ಲೊ? ರಾಯರ ಬುದ್ಧಿ— ಊರ್ಧ್ವಮೂಲ ಅಶ್ವತ್ಥ ನೋಡು. ನನ್ನ ಮುಂದೆ ಹೇಳಿದರು, "ಗೋಪಾಲಾಚಾರೀ, ತನ್ನ ಹೊಟ್ಟೆ ತುಂಬಿಕೊಳ್ಳುವ ಯೋಗ್ಯತಾ ಇಲ್ಲದವನಿಗೆ ಮಕ್ಕಳು ಯಾಕೆ?" ಅಂತ. "ಅಹುದು, ರಾಯರೆ" ಅಂದೆ ನಾನು. "ಸುಳ್ಳೇ ಮಕ್ಕ-ಳನ್ನು ಕಟ್ಟಿಕೊಂಡು ಏನು ಮಾಡೋದು?" "ಅಂತಹ ಸ್ಥಿತಿಯಲ್ಲಿ ಮಕ್ಕಳನ್ನು ಹಡೆಯುವುದು ಪಾಪ" ಅಂದರು. "ರಾಯರೆ, ಪಾಪಕ್ಕೆ ಬ್ರಾಹ್ಮಣನಲ್ಲಿ ಎಂದಿಗೂ ಆಶ್ರಯವಿಲ್ಲ" ಅಂದೆ. ಯಾಕೆಂತೆಂದರೆ— ಅಹುದಲ್ಲೊ ಹೇಳು.. ಆದರೆ ಹೆಂಗಸರಿಗೆ ತಿಳಿಯೋದು ಹೇಗೆ ಇದೆಲ್ಲ?

**ಪದ್ಮನಾಭ:**— (ದಂಗುಬಡಿದವನಂತೆ) ಅಲ್ಲೊ, "ಹೊಟ್ಟೆ ತುಂಬು-ತ್ತಿದ್ದಿಲ್ಲ ಅಂದರೆ ಮಕ್ಕಳು ಬೇಡ" ಅನ್ನುವ ಮಾತಿಗೆ ಒಪ್ಪಿಕೊಂಡೆಯಾ? ಈಗ ಬ್ರಾಹ್ಮಣರ ಹೊಟ್ಟೆತುಂಬುವ ದಿವಸೇ ನಿಂತೇ ಹೋಗಿವೆ. ಅದಕ್ಕೆ ಬ್ರಾಹ್ಮಣರ ವಂಶವೇ ನಿಂತು ಹೋಗಬೇಕು ಅನ್ನುವೆಯೋನೊ?

**ಗೋಪಾ:**—(ಪಾಂಡಿತ್ಯಾಟೋಪದಿಂದ) ಏನಾದರೊಂದು ಹೇಳಬೇಡ. ಯಾಕೆಂತೆಂದರೆ, ಯೋಗ್ಯತಾ ಇದ್ದವನ ಹೊಟ್ಟೆ ತುಂಬೇ ತುಂಬುವದು ಎಂದಿಗೂ.

**ಪದ್ಮನಾಭ:**— ಹಾಗಾದರೆ! ನಿನ್ನಲ್ಲಿ ಯೋಗ್ಯತಾ ಇಲ್ಲ ಅನ್ನುವೆಯಾ?

**ಗೋಪಾ:**—(ತಡೆಯದೆ) ನನ್ನದಲ್ಲೊ! ವ್ಯವಹಾರದ ಮಾತು ಹೇಳಿದೆ. ನಾನು ವ್ಯಾಕರಣ ಓದಿದವ, ಯಾಕೆಂತೆಂದರೆ ನೀನು ನ್ಯಾಯ ಓದಿದವ ಅಂತ ಮಾತಿನ ಜಂಭ ತೋರಿಸಬೇಡ ನನ್ನ ಮುಂದೆ.... ಇಂತಹದೆಲ್ಲ—ಯಾಕೆಂತೆಂದರೆ ಹೆಂಗಸಿಗೆ ತಿಳಿಯೋದು ಹೇಗೆ ನೋಡು.. ನಮ್ಮ ಮನೆಯೊಳಗೆ ಅದೂ ಅಂತೂ— ಪಾಪ! ೧೪ ವರ್ಷದ ಕೂಸು—

೧೪ ಅಂದರೆ ಹದಿನಾಲ್ಕೇ ಇಲ್ಲ. ಯಾಕೆಂತೆಂದರೆ ಮುಂದಿನ ಪ್ಯಗಕ್ಕೆ ೧೩ ತುಂಬುವದು. ಕೂಸಿನ್ನ ಎತ್ತಿಕೊಂಡು ಆಡಿಸುವ ತ್ರಾಣ, ಬುದ್ಧಿ ಬೇಕೋ ಬೇಡವೊ ಹೇಳು.

**ಪದ್ಮನಾಭ:**— ( ನಕ್ಕು ) ಅದಕ್ಕೆ ಶಿಶುಭೋಜನ ಅಂದರೆ ಅಷ್ಟು ಹೆದರಿದೆಯಾ ?

**ಗೋಪಾ:**—( ಅಸಹ್ಯದ ಹಟದಿಂದ ) ಅಲ್ಲ— ಅದಕ್ಕಲ್ಲ. ( ಮನೆಯ ಕಡೆಗೆ ನೋಡಿ ಮೆಲ್ಲಗೆ ) ಯಾಕೆಂತೆಂದರೆ— ನೀನು ವಾಚಸ್ಪತಿ ! ಇದು ಒಂದುವೇಳೆ ಗೊತ್ತಾಗಿ ಅದಕ್ಕೆ ಶಿಶುಭೋಜನ ಅಂದೆಯೋನೋಂತೆ ಹೆದರಿಕೆ.

**ಪದ್ಮನಾಭ:**—ನೀನು ವ್ಯಾಕರಣ ಓದಿದ್ದು ಸುಳ್ಳಲ್ಲ ನೋಡು. " ಇದು " ಅಂದರೆ ಯಾವದು ? " ಇದು " ಇದ್ದುದಕ್ಕೆ ನಾನು " ಅದು " ಅಂತೆ ಯಾಕೆ ಅನ್ನಲಿ ?

**ಗೋಪಾ:** — ( ಕೆರಳಿ ) ತಡೆಯೊ ಒಂದಿಷ್ಟು ! ಯಾಕೆಂತೆಂದರೆ— ದಕ್ಷಿಣಾ ಕೊಡುವ ಯಜಮಾನನ ಮುಂದೆ ಮಾತಾಡಿದ ಹಾಗೆ ಮಾತ-ನಾಡುವೆಯಲ್ಲ ! ( ಮೆಲುದನಿಯಲ್ಲಿ ಮನೆಯ ಕಡೆಗೆ ನೋಡುತ್ತ ) ಇಲ್ಲಿಯೂ ಒಂದು ಶಿಶುಭೋಜನ ಆಯ್ತು.

**ಪದ್ಮನಾಭ:**—ಓಹೊ ! ಅಂತೂ ಮಾತನಾಡುವ ಬುದ್ಧಿ ಕಲಿತೆ ! ಕೂಸಿನ ಶಾಂತಿ-ಸಮಾರಾಧನೆ ಸಮೀಚೀನ ಆಗಿತ್ತೂಂತೆ ಹೇಳಲಿಕ್ಕೆ—

**ಗೋಪಾ:**— ( ಒಮ್ಮೆಲೆ ) **ಕೂ-ಸೇ ಶಾಂತ ಆಯ್ತು !**

**ಪದ್ಮನಾಭ:**—( ಬೆಪ್ಪಾಗಿ ) ಅಂ—

**ಗೋಪಾ:**—( ಗೆದ್ದೆನೆಂಬ ಹೆಮ್ಮೆಯಿಂದ ) ನಿನ್ನೆ ರಾತ್ರಿ— ಯಾರ ಮುಂದೆಯೂ ಹೇಳಬೇಡ ಮತ್ತೆ, ಯಾಕೆಂತೆಂದರೆ ನಮಗೇನು ಮಾಡುವದು ?— ನಿನ್ನೆ ರಾತ್ರಿ ಕೂಸಿನ ಕಂಠ ( ಕೈಯಿಂದ ಸೂಚಿಸುವನು ) ಹುಂ. ಆಯ್ತು.

**ಪದ್ಮನಾಭ:**—( ತಿಳಿಯದೆ ) ಏನೇನೇನು ? ಏನ ಹೇಳುವೆಯೊ ? ನಿನ್ನೆ ರಾತ್ರಿ ಕನಸು—

**ಗೋಪಾ:**—( ಹತಾಶನಂತೆ ) ನೀನು ಆ ಮಹಾಸುರ ಸಂಕರನ ಜಾತಿಯೊಳಗೆ ಹುಟ್ಟಬೇಕಾಗಿತ್ತು ನೋಡು. ಯಾಕೆಂತೆಂದರೆ—ವ್ಯವಹಾರ ಕನಸು ಅನ್ನುವೆಯಲ್ಲ !

**ಪದ್ಮನಾಭ:**—( ಬೆಮರೊಡೆದವನಂತೆ ) ಅಲ್ಲೊ, ಅದು–ಪಾಪ–ಶಿಶುಹತ್ಯೆ—?

**ಗೋಪಾ:**—( ನಡುವೆಯೆ ) ಅದೇ. ಅದೇ. ಆದರೆ ದೊಡ್ಡವರಿಗೆ ಆ ಮಾತು ಇಲ್ಲ, ಪದ್ಮನಾಭಾ.

**ಪದ್ಮನಾಭ:**— (ಸೋಲಿನಂತೆ) ಆದರೂ ಇಂತಹ ಕೆಲಸ ಮಾಡುವದು—

**ಗೋಪಾ:**— ( ನಡುವೆಯೆ ) ಸುಲಭ. ದೊಡ್ಡವರಿಗೆ ಸುಲಭ. ಯಾಕೆಂತೆಂದರೆ ನಮಗೆ ಮಕ್ಕಳು ಬೇಡವೆ ಬೇಡ ಅಂತಾರೆ. ಹುಟ್ಟಿದರೂ ಬೇಡ ಅಂತಾರೆ.

**ಪದ್ಮನಾಭ:**—( ಉಸುರ್ಗರೆದು ) " ವಿಷ್ಣುಪತ್ನಿ ನಮಸ್ತುಭ್ಯಂ " ( ಎಂದು ತಟ್ಟೆಯ ಮೇಲೆ ಕುಳಿತು, ನಿಮಿಷಾರ್ಧ ದಂಗುಬಡೆದವನಂತೆ **ಸುಮ್ಮ**ನಿದ್ದು, ಸಾವಕಾಶ ದೋತರದಲ್ಲಿ ಇದುವರೆಗೆ ಮುಚ್ಚಿಟ್ಟ ತಟ್ಟೆಯನ್ನು ಹೊರಗೆಳೆದು ಅದರಲ್ಲಿ ತುಂಬಿದ ಹುವ್ವುಗಳನೆಲ್ಲ ಚಲ್ಲಿ ) ಇದೊ— ಇವರ ಮನೆಯ ಹುವ್ವು.. ಮುಟ್ಟುವದಿಲ್ಲ.... ದೇವರಿಗೆ ಅರ್ಪಿಸುವದು ಎಂದು ಪ್ರಾತಃಕಾಲದಲ್ಲಿ, ಪಾಪದ ಸುಳಿದಾಟವಿಲ್ಲದ ಕಾಲದಲ್ಲಿ ಬಂದು ಆಯ್ದುಕೊಂಡರೆ—

**ಗೋಪಾ:**—( ನಕ್ಕು ) ಓಹೊಹೊ ! ದಿನಾಲು ಹುವ್ವೇ ಇಲ್ಲ ಎಂದು ರಾಯರು ಕೋಪಿಸುತ್ತಿದ್ದರು. ನನಗೆ ಗೊತ್ತಿರಲಿಲ್ಲ. ಯಾಕೆಂತೆಂದರೆ—

**ಪದ್ಮನಾಭ:**—( ಸಿಟ್ಟಿನಿಂದ ) ಕೂಸಿನ ಕುತ್ತಿಗೆ ಕೊಯ್ಯುವಷ್ಟು ಹುವ್ವನ್ನು ಕೊಯ್ಯುವದು ಪಾಪವಲ್ಲ— ಅದೂ ದೇವರಿಗೆಂದು !

**ಗೋಪಾ:**—( ವಿಷಯವನ್ನು ಬದಲಿಸುವ ಹವಣಿಕೆಯಿಂದ ) ಆಹಾ ! ನೀನೇ ಹೇಳಿಬಿಟ್ಟೆಲ್ಲ ! ಯಾಕೆಂತೆಂದರೆ— ಮಾಡುವಾತಾ ಮಾಡಿಸುವಾತಾ

**ಅವನೆ.** ಅವನದೆ ಹೊಣೆ. ಅತ್ತುಕರೆದು ಮಾಡುವದೇನು ? ( ಬಂದು ಕುಳಿತುಕೊಳ್ಳುವನು )

**ಪದ್ಮನಾಭ:**—( ತಿರಸ್ಕಾರದಿಂದ ) ಹೇಸಿಕೆಯೆ ಇಲ್ಲವಾದ ಮೇಲೆ ಅಳುವರು ಯಾರು, ಕರೆಯುವರು ಯಾರು ?

**ಗೋಪಾ:**— ( ದೀನಬಂಧುವಿನಂತೆ ) ಛೆ! ಛೆ! ಹಾಗೆನ್ನಬೇಡ. ಪದ್ಮನಾಭಾ, ತಾಯಿಯ ಕರುಳು, ಯಾಕೆಂತೆಂದರೆ, ಅನಂತಯಾತನೆ-ಗಳನ್ನು ಅನುಭವಿಸುವದು. ಪಾಪ ! ಪ್ರಸೂತಳಾದಾಗಿನಿಂದ ಹುಡುಗೆಗೆ ಸನ್ನಿಪಾತವಾಗಿತ್ತಂತೆ ! ಕೂಸು ಸತ್ತನಿಮಿಷದಲ್ಲಿ ಎಚ್ಚರವಾಗಿದ್ದಾಳೆ ? " ನನ್ನ ಕೂಸು, ನನ್ನ ಕೂಸು ? " ಎಂದು ಹಲಬುವಳಂತೆ ಒಂದೇ ಸವನೆ! ಪಾಪ !

**ಪದ್ಮನಾಭ:**— ( ಹಟದಿಂದ ) ಪಾಪಕ್ಕೆ ಪ್ರಾಯಶ್ಚಿತ್ತ ಅದು .. ನಮಗೇನು ಮಾಡುವುದು .. ಮಹಾರಾಯಾ, ಇಂತಹರ ತುಲಸೀಗಿಡ ಮುಟ್ಟಿದುದರ ಸರ್ವಪಾಪ ಪರಿಹಾರವಾಗಲಿ. . ಕೈಯನ್ನಾದರೂ ತೊಳೆದು ಕೊಳ್ಳುವೆ. ( ಎಂದು ತಂಬಿಗೆಯನ್ನು ಎತ್ತಬೇಕೆನ್ನುವಷ್ಟರಲ್ಲಿ ಗೋಪಾಲಾ ಚಾರ್ಯನು " ಹಾಂ! ಯಾಕೆಂತೆಂದರೆ " ಎಂದು ಲಗಬಗೆಯಿಂದ ಕಸಿದು ಕೊಳ್ಳಲು— ಆಶ್ಚರ್ಯದಿಂದ ) ಇದೇನೊ ! ಬಿಸಿ ನೀರು!— ಕೈ ಸುಟ್ಟಿತಲ್ಲ ಮುದ್ರಾಧಾರಣೆ ಮಾಡಿದಂತೆ !

**ಗೋಪಾ:**— ( ಸುಳ್ಳು ನಗೆಯಿಂದ ) ಬಿಸಿನೀರು ಅಲ್ಲ. ಯಾಕೆಂ ತೆಂದರೆ—ಅದು ಕಷಾಯ. ನಿನ್ನಿನ ಗಲಾಟೆಯೊಳಗೆ ನಿದ್ದೆ ಸರಿಯಾಗಲಿಲ್ಲ. ಅದಕ್ಕೆ—

**ಪದ್ಮನಾಭ:**— ( ಇಷ್ಟರಲ್ಲಿಯೆ ಒಂದೆರಡು ಸಲ ಮೂಗು ಏರಿಸಿ ) ಕಷಾಯ ! ಎಂತಹ ಹುಚ್ಚನೊ ನೀನು ! ಯಾರೊ ಮೋಸಹಾಕಿದ್ದಾರೆ ನಿನಗೆ. ಅದು ಕಷಾಯ ಅಲ್ಲ. ಚ–ಹಾ–

**ಗೋಪಾ:**— ( ಧರ್ಮಗ್ಲಾನಿಯಾದವನಂತೆ ) ಛೆ- ಅಲ್ಲ- ಯಾಕೆಂ ತೆಂದರೆ- ನಿನಗೇನು ತಿಳಿಯುವದು ?

**ಪದ್ಮನಾಭ:**— (ನಕ್ಕು) ನನಗೇನು ತಿಳಿಯುವದು! ದಿನಾಲು ಕುಡಿಯುವೆ ನಾನು—

**ಗೋಪಾ:**— (ಒಮ್ಮೆಲೆ) ದಿನಾಲು?

**ಪದ್ಮನಾಭ:**— (ಹೆಮ್ಮೆಯಿಂದ) ಅಹುದು. ಅದೇನು ದೋಷ—

**ಗೋಪಾ:**— (ಒಮ್ಮೆಲೆ ಸಿಡಿದೆದ್ದು) ನಿನ್ನ ತಲೆ! ಯಾಕೆಂತೆಂದರೆ— ಮೊದಲೇ ಹೇಳಿದ್ದೆಯಂದರೆ ಇಷ್ಟೊತ್ತು ನಾನೆಲ್ಲಿ ಅದನ್ನು ಆರಗೊಡುತ್ತಿದ್ದೆ? ನಿನಗೆ ಸೇರಲಿಕ್ಕಿಲ್ಲ ಎಂದು .... .... ... ನಿನ್ನ ತಲೆಯೊ! ಪದ್ಮನಾಭಾ. ಯಾಕೆಂತೆಂದರೆ— ಹಿಡಿ ಮೊದಲು, ಇಷ್ಟರಲ್ಲಿ ತಣ್ಣಗೇ ಆಗಿರಬಹುದು. (ಎಂದು ಅತ್ಯಂತ ರಭಸದಿಂದ ಪಾತ್ರೆಯಲ್ಲಿ ಅವನಿಗೆ, ತಂಬಿಗೆಯಲ್ಲಿದ್ದುದು ತನಗೆ ಎಂಬ ವ್ಯವಸ್ಥೆಯಲ್ಲಿ ಇಬ್ಬರೂ ಕುಡಿಯುವರು. ಪದ್ಮನಾಭಾಚಾರ್ಯನು ಮೊದಲು ಮುಗಿಸಿ ತಂಬಿಗೆಯಿಂದ ಗೋಪಾಲಾಚಾರ್ಯನು ಕುಡಿಯುವ ಕೌತುಕವನ್ನು ನೋಡಿ, ಅವನು ಕೊನೆಗೆ ಬರಿದಾದ ತಂಬಿಗೆಯನ್ನು ಕೆಳಗಿಟ್ಟನಂತರ)

**ಪದ್ಮನಾಭ:**— (ಸಂತೋಷದಿಂದ ತೇಗಿ) ಈ ಹೊತ್ತು ಮನಸಿಗೆ ಸಮಾಧಾನವಾಯ್ತು ನೋಡು. ಆ ಹಾಳು ಬಿಳಿಮಣ್ಣಿನ ಪಾತ್ರೆಯೊಳಗೆ ಕುಡಿಯುವದೆಂದರೆ ನನಗೆ ಯಾಕೊ ಮುಸುರೆ-ಮುಸುರೆ, ಮೈಲಿಗೆ-ಮೈಲಿಗೆ ಅನ್ನಿಸುವದು. ತಾಮ್ರದ ಪಾತ್ರೆಯೊಳಗೆ ಅಂದರೆ—

**ಗೋಪಾ:**— ನನಗೂ ಹಾಗೆಯೆ. ಅಂಗಡಿಯೊಳಗಿನ ಡಬ್ಬಿಯ ಪುಡಿ ಕೂಡ ನನಗೆ ಸರಿಹೋಗುವದಿಲ್ಲ ಯಾಕೆಂತೆಂದರೆ— ಶ್ರದ್ಧೆಯಿಂದ ತರುವ ಒಂದು ಹಿಡಿ ಅಕ್ಕಿಯ ಬದಲು ಒಂದು ಮುಷ್ಟಿ ಚಹಾದ ಪುಡಿ ತೆಗೆದುಕೊಂಡು ಬರ್ರಿ ಎಂದು ನನ್ನ ಪುರಾಣಕ್ಕೆ ಬರುವವರಿಗೆ ಯಾವಾಗಲೂ ಹೇಳುವೆ. ಯಾಕೆಂತೆಂದರೆ—

**ಪದ್ಮನಾಭ:**— (ಒಮ್ಮೆಲೆ ಗಟ್ಟಿಯಾಗಿ ನಗುವನು. ತಡೆಯುತ್ತ ಬೆಪ್ಪಾದ ಗೋಪಾಲಾಚಾರ್ಯನಿಗೆ) ಪುರಾಣ ಅಂದಕೂಡಲೆ ಸ್ಮರಣೆಗೆ ಬಂದಿತು .... ಹಹ! ನಮ್ಮನೆಯಾಕೆ ಇನ್ನೂ ಹೇಳಿ ಹೇಳಿ ನಗುವಳು.

**ಗೋಪಾ:**— (ಸಂಶಯದಿಂದ) ಏನು? .. ಯಾಕೆಂ.... ....

**ಪದ್ಮನಾಭ:—** ಹೆದರಬೇಡೊ.... ಹಹ! ನಿನ್ನ ಬುದ್ಧಿ ಇಷ್ಟೊಂದು ಚುರುಕು ಆದೀತೂಂತ—

**ಗೋಪಾ:—** (ಹೆಚ್ಚಿನ ಸಂಶಯದಿಂದ) ಯಾವುದು? ಏನದು? ಯಾಕೆಂತೆಂದರೆ ಪುರಾಣದಲ್ಲಿ—

**ಪದ್ಮನಾಭ:—** (ತಡೆದು) ಅಲ್ಲೊ, "ಯಶೋದಾ ಕೃಷ್ಣನ ಸಾಕಿದ ತಾಯಿ; ಆಕೆ ದೇವಿಯರು" ಅಂತ ಹೇಳಿ "ಮಂದಿಯ ಮಕ್ಕಳನ್ನು ಸಾಕುವ ಕೃಷ್ಣಾತಾಯಿಯರೆಲ್ಲ ದೇವಿ ಎಂದು ತಿಳಿಯಬೇಡಿರಿ" ಅಂತ ಹೇಳಿದೆಯಂತಲ್ಲ! ಹಹ!

**ಗೋಪಾ:—** (ನಕ್ಕು) ಅಹಾ! ಅದು!.... ಹಹ! (ಗಾಂಭೀರ್ಯದಿಂದ) ಅಪರೂ ಚಮತ್ಕಾರ! ಯಾಕೆಂತೆಂದರೆ— (ಮೆಲುದನಿಯಲ್ಲಿ) ಕೃಷ್ಣಾತಾಯಿ ದೇವಕಿ ಆಗುವ ಪ್ರಸಂಗ ಬಂದಿದೆ.

**ಪದ್ಮನಾಭ:—** (ಆಶ್ಚರ್ಯದಿಂದ) ಆಂ....

**ಗೋಪಾ:—** (ಹೆಮ್ಮೆಯಿಂದ) ಅಂದರೆ ಕಾರಾಗೃಹಕೆ ಹೋಗುವ ಪ್ರಸಂಗ ಬಂದಿದೆ.

**ಪದ್ಮನಾಭ:—** (ತಿಳಿಯದೆ) ಏನೇನೇ .... ....

**ಗೋಪಾ:—**(ತಾಳಕ್ಕೆ ಸರಿಯಾಗಿ) ಮ–ತ್ತೇ–ನು? ಯಾಕೆಂತೆಂದರೆ– (ಮೆಲ್ಲಗೆ) ರಾಮಣ್ಣ ಇದ್ದಾನಲ್ಲ– ನಮ್ಮ ರಾಯರ ಮಗ. ಅವನಿಗೆ ಎಲ್ಲಾ ಗೊತ್ತಾಗಿದೆ. ಯಾಕೆಂತೆಂದರೆ— ನಿನ್ನೆ "ಆಚಾರ್ಯರೆ, ಸ್ಥಿತಿ ಅಂತೂ ಹೀಗೆ ಹೀಗೆ. ಅದಕ್ಕೆ ಈ ಹೆಣ್ಣುಮಗಳು ಇನ್ನು ನಮ್ಮನೆಯ ಪಾವಟಿಗೆ ಹತ್ತದಹಾಗೆ ಮಾಡಬಾರದೆ?" ಅಂದ.... ಏನೊ!.... ನನ್ನ ಇಚ್ಛಾ (ಮೇಲೆ ನೋಡಿ) ಆತನಿಗೆ ತಿಳೀತೇನೊ! ಆ ಹೆಣ್ಣುಮಗಳು ಅಷ್ಟರಲ್ಲಿ ಒಂದು ಔಷಧದ ಪುಡಿಕೆ ಕಳುಹಿಸಿಕೊಟ್ಟಳು. ಚಮತ್ಕಾರ! ಪದ್ಮನಾಭಾ! ಯಾಕೆಂತೆಂದರೆ— ಆ ಪುಡಿಕೆ ಹಾಕಿದ ಒಂದೆರಡು ನಿಮಿಷಗಳೊಳಗೆಯೆ ಆ ಕೂಸಿನ ಪ್ರಾಣ ಹೋಗಬೇಕೆ?

**ಪದ್ಮನಾಭ:—** ಪೂತನಿ! ಪೂತನಿಯೊ, ಗೋಪಾಲಾ, ಅವಳು!

**ಗೋಪಾ:**—( ತತ್ವಜ್ಞಾನಿಯಂತೆ) ನೋಡು ಅಂದೆ. ಯಾಕೆಂತೆಂದರೆ ಜಗತ್ತು ಹೀಗೆ ಇದ್ದೀತೂಂತ ಕನಸುಮನಸಿನಲ್ಲಿಯಾದರೂ ಹೊಳೆಯ ಬಹುದೆ ?

**ಪದ್ಮನಾಭ:—** ( ತಾನೂ ತತ್ವಜ್ಞಾನಿಯಲ್ಲವೆ ? ಎಂಬಂತೆ ) ನಮ್ಮ ನಿಮ್ಮಂತಹಾ ಹುಚ್ಚರಿಗೆ ಏನು ತಿಳಿಯುವದು ಇಂತಹ ಮುಚ್ಚಿಟ್ಟ ವಿಷದ ಬಟ್ಟಲ !

**ಗೋಪಾ:—** ಅದೇ, ಅದೇ. ನಾನಾದರೂ ಹೇಳತೀನಿ— ಯಾಕೆಂತೆಂದರೆ— ಎರಡನೆಯವರನ್ನು ಕಟ್ಟಿಕೊಂಡು ನಮಗೇನು ಮಾಡುವದಿದೆ? ನಮ್ಮ ಕರ್ಮ, ನಮ್ಮ ನಿಯಮ—

**ಪದ್ಮನಾಭ:**— ( ಸಂಧಿ ಸಿಕ್ಕಿತೆಂಬಂತೆ ) ಯೋಗ್ಯ ಮಾತು ಹೇಳಿದೆ ನೋಡು. ನನ್ನ ಹುಡುಗರಿಗೆ ಇದನ್ನೆ ಹೇಳುತ್ತಿರುವೆ. "ಹುಡುಗರಿರಾ, ಬ್ರಾಹ್ಮಣ ಸರಿಯಾಗಿ ತನ್ನ ಕರ್ಮ, ತನ್ನ ನಿಯಮ ಪಾಲಿಸಿದರೆ ಕೆಟ್ಟ ವಿಚಾರ ಮಾಡಲಿಕ್ಕೆ ಕೂಡ ಅವನಿಗೆ ಒಂದು ನಿಮಿಷ ದೊರೆಯಲಿಕ್ಕಿಲ್ಲ" ಅಂತ.... ಹುಡುಗರನ್ನು ಜಪ್ಪಿಸುವದು ದುಸ್ತರ ಆಗಿದೆ ಈಗಿನ ಕಾಲದಲ್ಲಿ !

**ಗೋಪಾ:**— ಆದರೂ ಅದರ ಫಲ ಅನುಭೋಗಿಸುವರು, ಪದ್ಮನಾಭಾ, ಅನುಭೋಗಿಸಹತ್ತಿರುವರು ಇಷ್ಟರಲ್ಲಿ. ಯಾಕೆಂತೆಂದರೆ— ಇಲ್ಲಿ ನೋಡು, ನಮ್ಮನಮ್ಮ ಹುಡುಗರನ್ನು ನಮ್ಮ ವಿರುದ್ಧ ಹೂಡಿಸಿದ ರಾಮಣ್ಣಾಗೆ ನಡೆದಿದೆ, ಯಾಕೆಂತೆಂದರೆ ನಡೆದಿದೆ ಪ್ರಾಯಶ್ಚಿತ್ತದ ಭೋಗ! ತಂದೆಯ ಮೇಲೆ ಸಂಶಯ ; ಮಂದಿಯ ಮೇಲೆ ಸಂಶಯ.... " ನಿಮ್ಮ ಮನೆಯೊಳಗೆ ಇನ್ನು ಇರೋದಿಲ್ಲ " ಅಂದ ತಂದೆಗೆ— ನಿನ್ನೆ ಕೂಸಿನ ಕಥೆ ಆದ ಮೇಲೆ. "ನಮ್ಮ ಮನೆಯೊಳಗ ಈ ಹೆಂಗಸಿಗೆ ಇಷ್ಟ್ಯಾಕೆ ಮರ್ಯಾದೆ?" ಅಂದ ಕೃಷ್ಣಾತಾಯಿಗೆ. "ಮಕ್ಕಳು ಬೇಡ ಅಂತ ಹೊರಗೆ ವ್ಯಾಖ್ಯಾನ ಕೊಟ್ಟು, ಮನೆಯೊಳಗೆ ಮಗಳು ಹಡೆದದ್ದಕ್ಕೆ ನಾಚಿ— ಆ ಕೂಸಿನ್ನ ಇವ-ರಿಬ್ಬರೂ ಕೊಂದು ಬಿಟ್ಟರು " ಅಂದ !

**ಪದ್ಮನಾಭ:—** ರಾಮ-ರಾಮ ! " ಕಲಿಯುಗದ ಮಹಿಮೆ ತಾ

ಕಾಣಬಂತೀಗ!" ಗೋಪಾಲಾ. ಇಂತಹ ಯಜಮಾನರನ್ನು ಹಿಡಿದದ್ದಕ್ಕೆ ದೇವರೇ ನಿನ್ನ ನೋಡಿಕೋಬೇಕು. (ಹೊರಡುವನು).

**ಗೋಪಾ:—** (ಆಶ್ಚರ್ಯದಿಂದ) ಯಾಕೊ, ಹೊರಟೆಯಲ್ಲ! ಯಾಕೆಂತೆಂದರೆ—

**ಪದ್ಮನಾಭ:—** (ಎಡಬದಿಗೆ ನಡೆದು ನಿಂತು) ಕಷಾಯದ ಎರಡನೆಯ ಹೊತ್ತಾಗತಾ ಬಂತು.

**ಗೋಪಾ:—** (ಒಮ್ಮೆಲೆ) ಎಲೆ–ಇಷ್ಟು ಹೊತ್ತಾಯಿತೆ?.... ಕೆಲಸ ಇದ್ದಿತೊ.. (ಮುಂದೆ ಬಂದು, ಮೆಲ್ಲಗೆ) ಪದ್ಮನಾಭಾ, ಯಾರ ಮುಂದೆಯೂ ಮತ್ತೆ ಆ ಇದನ್ನ—

**ಪದ್ಮನಾಭ:—** (ನಕ್ಕು) ಶಿಶುಭೋಜನ ಅಹುದಲ್ಲೊ!.. ದಕ್ಷಿಣೆ ಕೈಯೊಳಗೆ ಬೀಳದ ಹೊರತು ಅದು ಶಾಸ್ತ್ರಕ್ಕೆ ಸಮ್ಮತ ಭೋಜನ ಅನ್ನಿಸು–ವದಿಲ್ಲ. (ಕೂಸಿನಂತೆ ಬೊಟ್ಟು ತಿಂದು ನಕ್ಕು ಹೋಗುವನು).

**ಗೋಪಾ:—** ಉಶ್.. (ಮನೆಯೊಳಕ್ಕೆ ಹೊರಟು) ಹರೇ ರಾಮ— ಹರೇ ರಾಮ; (ಯಾರೋ ಬರುತ್ತಿರುವ ಸುಳುವನ್ನು ಕಂಡು) ರಾಮರಾಮ ಹರೇಹರೇ— (ಎಂದು ನಡೆಯುತ್ತ) ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ—

[**ಕೃಷ್ಣಾತಾಯಿಯು ಬಂದುದನ್ನು ಈಗ ನೋಡಿದಂತೆ ತೋರಿಸಿ— ಹಲ್ಲುಕಿರಿಯುವನು. ಅವಳ ಮುಖದಲ್ಲಿ ಗಾಂಭೀರ್ಯವು ಹೆಚ್ಚಾದುದನ್ನು ನೋಡಿ, ಕೊಂಚ ಅಧೈರ್ಯದಿಂದ**]

ಹಂ.. ತಡವಾಯಿತು.. ಕಿಂಚಿತ್... ಸ್ವಲ್ಪ (ಸುಅಲ್‌ಪ ಎಂದು ಎಳೆದು) ಯಾಕೆಂತೆಂದರೆ, ಪ್ರಾತರ್ವಿಧಿ.... ಅಂದರೆ ಆಹ್ನಿಕ....

**ಕೃಷ್ಣಾತಾಯಿ:—** ಮುಗಿಯಿತಿಲ್ಲೊ ಒಮ್ಮೆ?

**ಗೋಪಾ:—** ಏನೂ ಅಡ್ಡಿ ಇಲ್ಲ, ಇನ್ನು ಮಧ್ಯಾಹ್ನದ ಭೋಜನ ಸಮಯದ ವರೆಗೆ. ಯಾಕೆಂತೆಂದರೆ—

**ಕೃಷ್ಣಾ ತಾಯಿ:**— (ನಡುಪೆಯೆ) ಅದೇನೆ ಇರಲಿ. ನಿಮ್ಮ ಹತ್ತಿರ ಒಂದು ಮಹತ್ವದ ಕೆಲಸ. ನಿಮ್ಮನ್ನೊಬ್ಬರನ್ನೆ ಕಾಣಬೇಕಾಗಿತ್ತು.. ಯಾರ ಕೂಡಲೊ ಬಹಳ ಹೊತ್ತು ಮಾತನಾಡುತಾ ನಿಂತುಕೊಂಡಿರಿ.. ಆದಕ್ಕೆ ನಾನೂ ಇಷ್ಟೊತ್ತು ಕಾದುಕೊಂಡು ಕುಳಿತಿದ್ದೆ.

**ಗೋಪಾ:**— ಛೆ, ಛೆ, ಸುಮ್ಮನೆ ಕಾದುಕುಳಿತಿರಲ್ಲ, ಕೃಷ್ಣಾತಾಯಿ.. ಯಾಕೆಂತೆಂದರೆ— ಆಗಲೇಬಂದು ಬಿಟ್ಟಿದ್ದರೆ ಬಹಳ ಒಳಿತಾಗುತ್ತಿತ್ತು!

**ಕೃಷ್ಣಾ ತಾಯಿ:**— ನಿಮ್ಮದೇನಾದರೂ ಚರ್ಚೆ ನಡೆದಿರಬಹುದೂಂತೆ—

**ಗೋಪಾ:**— (ನಕ್ಕು) ಚರ್ಚೆ! ಆ ಮುಠ್ಠಾಳ ಬ್ರಾಹ್ಮಣನ ಕೂಡ! ಹಹ.. ಯಾಕೆಂತೆಂದರೆ ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ!.. ನೋಡಿದಿರಿಲ್ಲೊ.... ಶುಭ ಇರಲಿ, ಅಶುಭ ಇರಲಿ, ಚಿತ್ರಗುಪ್ತರ ಹಾಗೆ ಬಂದೇ ಬಿಡುವ ಎಲ್ಲಿಂದಲೊ! "ಪಾಪ, ನಿನ್ನೆ ಏನೊ ಅನಾಹುತ ಆಯಿತಂತೆ ಇಲ್ಲಿ" ಅಂತ ಬಾಯಿಚಪ್ಪರಿಸುತ್ತ ಬೆಳಕುಹರಿಯುವದರೊಳಗೆಯೆ ಬಂದುಬಿಟ್ಟಿದ್ದ!

**ಕೃಷ್ಣಾ ತಾಯಿ:**— (ಬೆಚ್ಚಿ) ನಿನ್ನಿನ ಅನಾಹುತ! ಅವನಿಗೆ ಯಾರು ಹೇಳಿದರು?

**ಗೋಪಾ:**— ಯಾರು ಹೇಳಿದರು ಅಂತೀನಿ ನಾನೂ. ಯಾಕೆಂತೆಂದರೆ, ಅವನಿಗೆ ತಿಳಿಯಿತು ಹೇಗೆ?

**ಕೃಷ್ಣಾ ತಾಯಿ:**— (ಹೆದರಿಕೆಯಿಂದ) ನೀವು–ನೀವು ಏನು ಹೇಳಿದಿರಿ ಅವನಿಗೆ?

**ಗೋಪಾ:**— (ಹೆಮ್ಮೆಯಿಂದ) ನಾನು–ನಾನು–ಮೊದಲು–ಯಾಕೆಂತೆಂದರೆ ಅವನ ತಲೆ ಸೀಳಿ ಬಿಡುವಷ್ಟು ಕೋಪ ಬಂದಿತು.. ಆದರೂ ತಡೆದೆ · ಯಾಕೆಂತೆಂದರೆ—

**ಕೃಷ್ಣಾ ತಾಯಿ:**— (ಮತ್ತಿಷ್ಟು ಹೆದರಿ) ಅಲ್ಲ–ಅವನಿಗೆ ಏನು ಹೇಳಿದಿರಿ? ಅಂದೆ.

**ಗೋಪಾ:—** ( ನಗೆಯಿಂದ ) "ನೀನು ಇಲ್ಲಿಗೆ ಬಂದದ್ದೆ ಈ ಮನೆಯಲ್ಲಿ ಮೊದಲನೆಯ ಅನಾಹುತ" ಅಂದೆ. [ ಮೊದಲು ಸುಳ್ಳು ನಗೆ, ಆಮೇಲೆ ತನಗೆ ಸುಳ್ಳು ಸರಿಯಾಗಿ ಸಾಧಿಸಿತೆಂದು ಮನಸಾ ನಗುವನು ].

**ಕೃಷ್ಣಾ ತಾಯಿ:—** ( ಅತ್ತಿತ್ತ ನೋಡಿ ) ಏನೆ ಇರಲಿ, ಅದನ್ನೆ ನಿಮಗೆ ಹೇಳಬೇಕು ಅಂತ ಬಂದಿರುವೆ. ನಿನ್ನೆ ಸುಂದರಮ್ಮ ಗಾಬರಿಗೊಂಡು ಏನೇನೊ ಹೇಳಿದರಂತೆ. ನೀವೂ ಅಲ್ಲಿಯೆ ಇದ್ದಿರಂತೆ ಆಗ. ಆದರೆ ಎಲ್ಲಾ ಡಾಕ್ಟರರು ಕೂಡಿ ಅದೆಲ್ಲ ಸುಳ್ಳು ಎಂದು ಗೊತ್ತು ಮಾಡಿದರು.

**ಗೋಪಾ :—** ಛೆ, ಛೆ, ನನಗೇನು ಅಷ್ಟು ತಿಳಿಯುವದಿಲ್ಲವೆ? ಯಾಕೆಂತೆಂದರೆ—ಪಾಪ! ಸುಂದರಮ್ಮ ಎಷ್ಟು ಗಾಬರಿಯಾಗಿದ್ದರು ಅನ್ನುವಿರಿ!— ( ಮುಂದೆ ಬಂದು ಮೆಲುದನಿಯಲ್ಲಿ ) ಅಲ್ಲ ಕೃಷ್ಣಾತಾಯೀ, ಮತ್ತೆ ಕೂಸಿನ ಜೀವ ಭೂತಬಾಧಾಕ್ಕೆ ಆಹುತಿ ಆಯಿತೂಂತೆ ಸುಂದರಮ್ಮ ಈಗ ಹೇಳ್ತಾರಲ್ಲ!

**ಕೃಷ್ಣಾ ತಾಯಿ:—** ( ಕೊಂಚ ದರ್ಪದಿಂದ ) ಯಾರು ಹೇಳಿದ್ದು ನಿಮಗೇನು ಮಾಡುವದು? ಡಾಕ್ಟರರು ಹೇಳಿದ್ದೇ ನಿಜ!

**ಗೋಪಾ:—** ಅದೇ, ಅದೇ.. ಯಾಕೆಂತೆಂದರ ಒಮ್ಮೆ ಡಾಕ್ಟರರು ಶೀತಜ್ವರ ಅಂತ ಹಟ ಹಿಡಿದಾಗ, ವಿಷಮಜ್ವರದಿಂದ ಸತ್ತುಹೋದವರನ್ನು ನೋಡಿರುವೆ, ಅದಕಾಗಿ.

**ಕೃಷ್ಣಾ ತಾಯಿ:—** ( ಅವನನ್ನು ದಿಟ್ಟಿಸಿ ) ಇನ್ನೂ ಏನೇನು ನೋಡು-ವಿರೊ! ಅಲ್ಲಿಯ ವರೆಗೆ ಮಾತ್ರ ನೋಡಿದ್ದರ ಮೇಲೆ ವಿಶ್ವಾಸವಿಡಬೇಡಿರಿ ತಿಳಿಯಿತೆ?.... ( ಅಧಿಕಾರದಿಂದ ) ಹುಂ.- ಯಾರಾದರೂ ಕೇಳಿದರೆ ಏನು ಹೇಳುವಿರಿ?

**ಗೋಪಾ:—** ಇದೇನು, ಕೃಷ್ಣಾತಾಯಿ, ನಾನು ಕೂಸು ಎಂದು ತಿಳಿದಿರಲ್ಲ! ಯಾಕೆಂತೆಂದರೆ ಯಾರಾದರೂ ಕೇಳಿದರೆ— ಹುಂ. ನನಗೆ ಯಾಕೆ ಕೇಳುವರು? ಯಾಕೆಂತೆಂದರೆ ಕಣ್ಣಾರೆ ನೋಡಿದವರು ಸುಂದರಮ್ಮ ಅವರನ್ನೇ ಕೇಳಿರಿ ಅಂತೆ—

**ಕೃಷ್ಣಾತಾಯಿ:—** ( ಉದ್ವೇಗದಿಂದ ) ಅಮ್ಮಯ್ಯಾ, ಇವರೇನು ದಡ್ಡರೊ ದುಷ್ಟರೊ !.... ಯಾರೂ ಕಣ್ಣಾರೆ ನೋಡಿಲ್ಲ, ತಿಳಿಯಿತೆ ? ನೋಡಿದವರು ಡಾಕ್ಟರರು, ಅಷ್ಟೆ. ನಿಮ್ಮ ಪುಣ್ಯಾಕ್ಕೆ ಇದನ್ನಿಷ್ಟು ಪಾಠ ಮಾಡಿಬಿಡಬಾರದೆ ?

**ಗೋಪಾ:—** ( ವಿಚಾರಿಸುತ್ತ ) ಪಾಠ ಮಾಡುವದೇ ಸರಿಯಾದದ್ದು ಅಂತ ನನಗೂ ತೋರತದೆ. ಯಾಕೆಂತೆಂದರೆ, ನೀವು ಹೇಳಿದ್ದರ ಅರ್ಥವೆ ಆಗುವಂತಿಲ್ಲ ನನಗೆ.

**ಕೃಷ್ಣಾತಾಯಿ:—** ( ಮೊದಲಿನಂತೆ ) ಅರ್ಥವಾಗದಿದ್ದರೆ ಇಲ್ಲ.. ನಿಮ್ಮ ಪುಣ್ಯಾಕ್ಕೆ ವಿಪರೀತ ಅರ್ಥ ಮಾಡಬೇಡಿರಿ, ಗೋಪಾಲಾಚಾರ್ರೆ ?

**ಗೋಪಾ:—** ಇದೇನು, ಕೃಷ್ಣಾತಾಯೀ, ನಿಮ್ಮಲ್ಲಿ ವಿಪರೀತ ಅರ್ಥವೆ ? ಯಾರು ಏನು ಹೇಳಿದರೂ—ಯಾಕೆಂತೆಂದರೆ—

**ಕೃಷ್ಣಾತಾಯಿ:—** ( ಒಮ್ಮೆಲೆ ಸಂಶಯದ ಸ್ವರದಲ್ಲಿ ) ನ-ನ್ನ-ಲ್ಲಿ ?

**ಗೋಪಾ:—** ( ತಪ್ಪಿಸಿಕೊಳ್ಳುವವನಂತೆ ) ಹಂ.. ಅದೇ, ಅದೇ.. ಎಂದಿಗೂ ಇಲ್ಲ ಅಂತೆ ಹೇಳಿದೆ.

( ಕೃಷ್ಣಾತಾಯಿಯು ಏನನ್ನೊ ಮಾತನಾಡಬೇಕೆನ್ನುವಷ್ಟರಲ್ಲಿ " ನನ್ನ ಮಾತ-ನಾದರೂ ಕೇಳಿಕೊ " ಎಂದು ಸುಂದರಮ್ಮನು ಸಿಟ್ಟು ಮತ್ತು ಶೋಕಗಳ ರಭಸದಿಂದ ನಡೆದು ಬರುತ್ತಿರುವ ರಾಮಣ್ಣನ ಹಿಂದಿನಿಂದ ಬರುವಳು. )

**ರಾಮಣ್ಣ :—** ( ಬಂದವನೆ ಗೋಪಾಲನನ್ನೂ ಕೃಷ್ಣಾತಾಯಿಯನ್ನೂ ನೋಡುತ್ತ ನಿಲ್ಲುವನು. )

**ಸುಂದರಮ್ಮ:—** ( ಕಳಕಳಿಯಿಂದ ) ಅದಲ್ಲ, ರಾಮೂ, ನನ್ನ ಮಾತನಾದರೂ ಕೇಳಿಕೊ.

**ರಾಮಣ್ಣ:—** ( ಅಂ ಎಂದು ತಿರುಗಿ ನೋಡಿ ) ನಿಮ್ಮ ಮಾತು ಕೇಳಿ ಕೇಳಿ ಕೊಲೆಗಡಕತನದ ಪಾಪ ಕಟ್ಟಿಕೊಳ್ಳುವ ಪ್ರಸಂಗ ಬಂದಿತು. ಇನ್ನೂ—

**ಗೋಪಾ:—** ( ಮುಂದೆ ಬಂದು ) ಹೀಗೆ ಯಾಕೆ, ರಾಮಣ್ಣಾ ? ಯಾಕೆಂತೆಂದರೆ, ನೀವು ಮಾಡುವ ಪ್ರಯತ್ನ ಮಾಡಿದಿರಿ ಆದರೆ—

**ರಾಮಣ್ಣ**:—(ಅವನನ್ನು ಕೆಕ್ಕರಿಸಿ)ಆದರೆ ಸಂಪೂರ್ತಿ ಸಿದ್ಧಿಯಾಗಲಿಲ್ಲ.

**ಗೋಪಾ**:—(ಮೊದಲಿನಂತೆ) ಉಪಾಯವಿಲ್ಲದ ಮಾತು, ರಾಮಣ್ಣಾ.

**ರಾಮಣ್ಣ** :— (ತ್ವೇಷದಿಂದ) ಸಂಪೂರ್ತಿ ಸಿದ್ಧಿಯಾಗಲಿಲ್ಲ. ಕೂಸು ಒಂದೇ ಸತ್ತಿತು.. ನಮ್ಮ ಪ್ರಯತ್ನದಿಂದ ಇಬ್ಬರೂ ಸತ್ತುಹೋಗಲಿಲ್ಲ.. ಉಪಾಯವಿಲ್ಲ; ಅಲ್ಲವೆ?

**ಗೋಪಾ**:— ಇದೇನು– ಇದೇನು?

**ಕೃಷ್ಣಾತಾಯಿ**:—(ಮಾತು ತಪ್ಪಿಸುವ ಹಂಚಿಕೆಯಿಂದ ಸುಂದರಮ್ಮನಿಗೆ) ತಾಯಿಗೆ ಕ್ಷೇಮವಿದ್ದದ್ದು ನಿಮ್ಮ ಪುಣ್ಯ, ಸುಂದರಮ್ಮಾ.

**ರಾಮಣ್ಣ** :—(ತಡೆದದ್ದನ್ನೆಲ್ಲ ಉಗುಳುವವನಂತೆ)ತಾಯಿಗೆ ಕ್ಷೇಮವಿದೆ.. ಅಲ್ಲವೆ ಮತ್ತೆ? ಕೂಸು ಕಳೆದುಕೊಂಡ ತಾಯಿ ಸುಖವಾಗಿದ್ದಾಳೆ— ಹಾಡುತ್ತ, ಕುಣಿಯುತ್ತ, ಉಲ್ಲಾಸದಲ್ಲಿದ್ದಾಳೆ!

**ಕೃಷ್ಣಾತಾಯಿ** :— (ನೊಂದುಕೊಂಡು) ಇದೇನು? ಆಗಿ ಹೋದ ಮಾತಿಗೆ ನೀವು ಇಷ್ಟೊಂದು ಮನಸ್ಸಿಗೆ ಹಚ್ಚಿಕೊಂಡರೆ ಹೇಗೆ?.... (ಕಳಕಳಿಯಿಂದ) ಹೆಚ್ಚಿನ ಅನಿಷ್ಟ ಆಗಬಹುದಾಗಿತ್ತು. ನಮ್ಮ ಸುದೈವ.. (ಮುಂದೆ ಬಂದು) ನೀವೇ ಹೇಳಿಲ್ಲವೆ— ಮಗು ಹೋಗಲಿ, ತಾಯಿ ಬದುಕಲಿ, ಆನಂದ ಎಂದು—

**ರಾಮಣ್ಣ** :— (ಕೆರಳಿ) ಅಹುದು ನಾನೇ ಹೇಳಿದ್ದೆ. ಆದರೆ— (ತುಂಬಿಬಂದು) ಕೃಷ್ಣಾತಾಯೀ, ಮಗು ಕಳೆದರೆ ತಾಯಿ ಬದುಕುವದಿಲ್ಲ-ವೆಂಬ ಮಾತು ಆಗ ನನಗೆ ತಿಳಿದಿರಲಿಲ್ಲ. ..ತಾಯಿ ಬದುಕಲಿ.. ಆದರೆ ನನ್ನ ತಂಗಿಯು ಬದುಕಿರುವಳೆ?.. ಕೂಸಿನ ತಾಯಿಯು ಬದುಕಿರುವಳೆ? ನೋಡಿರುವಿರಾ? ಯಾರಾದರೂ ಆ ತಾಯಿಯ ಮುಖವನ್ನು? ತಿಳಿಯಾಗಿ, ಬಿಳಿಯಾಗಿ, ಧಾರೆಯಾಗಿ, ಧಾರಾಳವಾಗಿ ಮಮತೆಯ ಮೊಲೆಹಾಲಿನಿಂದ ಹರಿದುಹೋಗುವ ಆ ಮಾತೃಹೃದಯವನ್ನು ನೋಡಿರುವಿರಾ ಯಾರಾದರೂ? ದಳದಳ ಹರಿಯುವ ಕಣ್ಣೀರಿನಿಂದ, ಇಳಿದುಬಿಟ್ಟ ಕೂದಲಿನಿಂದ, ಕಳಕಳಿಯ ದನಿಯಿಂದ, "ನನ್ನ ಕೂಸು, ನನ್ನ ಕೂಸು ಎಲ್ಲಿದೆ" ಎಂದು ಕೈನೀಡಿ ಕರೆ–

ಯುವ ನನ್ನ ತಂಗಿಯ ದಿವ್ಯಸ್ವರೂಪವನ್ನು ನೋಡಿರುವಿರಾ ಯಾರಾದರೂ?

**ಗೋಪಾ:—** (ಉದ್ವೇಗದಿಂದ) ಅಯ್ಯೋ, ರಾಮಣ್ಣಾ, ಬೇಡ, ಬೇಡ. ಯಾಕೆಂತೆಂದರೆ— (ಒಮ್ಮೆಲೆ ಬಿಕ್ಕಿ) ಅಯ್ಯೋ, ತಡೆಯದು ನನಗೆ (ಎಂದು ಕಣ್ಣೀರು ಒರೆಸಿಕೊಳ್ಳುತ್ತ ಒಳಕ್ಕೆ ಹೋಗುವನು).

**ಸುಂದರಮ್ಮ:—** (ತನ್ನ ದುಃಖವನ್ನು ತಡೆಯುತ್ತ) ರಾಮೂ, ರಾಮಣ್ಣಾ, ನೀನು ಹೀಗೆ ಮಾಡಿದರ ಹ್ಯಾಗೊ? (ಎಂದು ಬೆನ್ನಮೇಲೆ ಕಯ್ಯಾಡಿಸುವಳು).

**ಕೃಷ್ಣಾತಾಯಿ:—** (ಏನು ಹೇಳಬೇಕೆಂದು ತಿಳಿಯದೆ) ಇದ್ದವರ ಸುಖವನ್ನು ನೋಡುವದು ನಿಮ್ಮ ಕರ್ತವ್ಯ.

**ರಾಮಣ್ಣ:—** ಆಗಲಿ, ಆಗಲಿ. (ಅತ್ತಿತ್ತ ದಾರಿತಪ್ಪಿದ ಕರುವಿನಂತೆ ತಿರುಗಾಡುತ್ತ) ಇನ್ನೂ ಏನೇನಿದೆ ನನ್ನ ಕರ್ತವ್ಯ!.. ಹುಂ.. ಉಳಿದವರಿಗೆ ಇನ್ನೂ ಸಮಾಧಾನ ಹೇಳಬೇಕಲ್ಲವೆ? .. ಕೂಸು ಮಡಿದರೇನಾಯಿತು? ಇನ್ನೂ ಕೂಸಿನ ತಾಯಿ ಇದ್ದಾಳೆ. ಅವಳನ್ನೂ ಆಹುತಿ ಮಾಡಿರಿ ಎಂದು ಹುರುಪುಗೊಳಿಸಬೇಕಲ್ಲವೆ? .. (ಕಟ್ಟಿಗೆ ನಿಂತು) ಒಂದು ಜೀವ ಕೈಬಿಟ್ಟರೇನಾಯಿತು? ಇನ್ನೂ ಎಷ್ಟೋ ಜೀವ ಉಳಿದಿವೆ ಕೊಲ್ಲುವದಕ್ಕೆ ಎಂದು ಸಮಾಧಾನ—

**ಸುಂದರಮ್ಮ:—** (ಕಣ್ಣೀರುತುಂಬಿ) ರಾಮೂ, ರಾಮೂ, ಏನ ಮಾತಾಡುವಿಯೊ? ಅಯ್ಯೋ, ದೇವರೆ, ಎಂತಹ ಪ್ರಸಂಗ ತಂದೆ!

**ಕೃಷ್ಣಾತಾಯಿ:—** (ಬೆಪ್ಪುಬಡೆದು) ಅಲ್ಲ—

**ರಾಮಣ್ಣ:—** (ಗದ್ಗದಿಸಿ) ತಡೆಯಿರಿ... ಇನ್ನೂ ನನ್ನ ಕರ್ತವ್ಯ ಮುಗಿದಿಲ್ಲ.. ಹತ್ತು ವರ್ಷದ ನನ್ನ ತಂಗಿಯನ್ನು ಕುರಿಯಂತೆ ಬೆಂಕಿಯ ಮುಂದೆ ನಿಲ್ಲಿಸಿ, ಬಟ್ಟೆಯಿಂದ ಕಣ್ಣು ಕಟ್ಟಿ, ಕಟುಕರಿಗೆ ಒಪ್ಪಿಸುವಾಗ ನಾನು ನಗುತ್ತಿದ್ದೆ, ನಲಿಯುತ್ತಿದ್ದೆ, ಅದು ನನ್ನ ಕರ್ತವ್ಯ; ಅದೇ ನನ್ನ ತಂಗಿಯು ಆ ಬೆಂಕಿಗೆ ಬೆಂಡಾಗಿ ಆಹುತಿಯಾಗುವಾಗ ನಾನು ಕಳವಳಿಸಬಾರದು, ಕಣ್ಣೀರು ಸುರಿಸಬಾರದು, ಅದು ನನ್ನ ಕರ್ತವ್ಯವಲ್ಲ, ಅಲ್ಲವೆ?

**ಸುಂದರಮ್ಮ:—** ನಿನ್ನ ಪುಣ್ಯ ದೊಡ್ಡದು, ಮಗೂ, ದೇವರು ನಿನಗೆ ನಿನ್ನ ತಂಗಿಯನ್ನು ಇಟ್ಟಿರುವ.

**ರಾಮಣ್ಣ:—** (ತಿರಸ್ಕಾರದಿಂದ) ಆ ದೇವನಿಗೆ ಬುದ್ಧಿಯಿಲ್ಲ.. ತಾನು ಇಟ್ಟದ್ದನ್ನು ಕಾಯ್ದುಕೊಳ್ಳುವ ಶಕ್ತಿ ಇದೆಯೆ ನಮ್ಮಲ್ಲಿ?.... ಅತ್ತೆ, ದೇವರು ನಿನ್ನ ಅಣ್ಣನಿಗೆ ಎಂತಹ ಮಗಳನ್ನು ಕೊಟ್ಟಿದ್ದ, ನನಗೆ ಎಂತಹ ತಂಗಿಯನ್ನು ಕೊಟ್ಟಿದ್ದ? ಅವನು ಕೊಟ್ಟದ್ದು ಉತ್ಸಾಹದಿಂದ ತುಂಬಿ ತುಳುಕಿ ತೂಗುವ ಜೀವದ ಗೊಂಚೆ; ಅದನ್ನು ಕಿಡಿಗೇಡಿ ಹುಡುಗರಂತೆ ಮುಗ್ಗಿ ತೆಗ್ಗಿ ಮುಸುರೆಯ ಸಿಂಬೆ ಮಾಡಿರುವೆವಲ್ಲವೆ?.... ಅತ್ತೆ, ನಾವು ಕಿಡಿಗೇಡಿ, ನಾವು, ಪಾಪಿ, ನಾವು ಕಟುಕರು (ಹಣೆಹಿಡಿದುಕೊಂಡು ಕಟ್ಟೆಯ ಮೇಲೆ ಕುಳಿತುಕೊಳ್ಳುವನು). ಪಾಪಿಗಳು— ಕಟುಕರು.

[ ಕೆಲಹೊತ್ತು ನಿಃಶಬ್ದತೆ ]

**ಸುಂದರಮ್ಮ:—** (ಮೆಲುದನಿಯಲ್ಲಿ ಕೃಷ್ಣಾತಾಯಿಗೆ) ಹುಡುಗನ ಮನಸ್ಸು ಬಹಾಳ ಮೆತ್ತಗ.. ಏನಮಾಡೋದು, ಕೃಷ್ಣಾತಾಯೀ..? ಹುಡುಗೆಯ ಗೋಳು ದೇವರೇ ಬಲ್ಲ!.... ನನಗಂತೂ ಎದುರು ಕೂತು ನೋಡೋದಾಗೋದಿಲ್ಲಾ.... ಶೀನಣ್ಣನ ಗೋಳು!.. (ರಾಮಣ್ಣನನ್ನು ನೋಡಿ) ಕೂಸು!.... ಅವನನ್ನು ಮಾತಾಡಿಸಬೇಡ.... ಅಂದರ ಸಮಾಧಾನ ಆದೀತೇನೊ?.... (ಉಸುರ್ಗರೆದು) ಇದ್ದವರನ್ನು ನೋಡಬೇಕಲ್ಲ, ಕೃಷ್ಣಾತಾಯೀ.... ಔಷಧ ಇಷ್ಟು ಕೊಟ್ಟು ಬರುವೆ.

(ಕೃಷ್ಣಾತಾಯಿಯು ತಲೆತೂಗಲು ಸುಂದರಮ್ಮನು ಹೋಗುವಳು. ಕೃಷ್ಣಾತಾಯಿಯು ಒಂದೇ ಸವನೆ ರಾಮಣ್ಣನನ್ನು ದಿಟ್ಟಿಸುತ್ತ ನಿಲ್ಲುವಳು.)

**ರಾಮಣ್ಣ:—** ('ಪಾಪಿಗಳು ಕಟುಕರು' ಎನ್ನುತ್ತ ಮೇಲೆ ನೋಡುವನು. ಕೃಷ್ಣಾತಾಯಿಯನ್ನು ಕಂಡು ಮತ್ತೆ ತಲೆಹಿಡಿದುಕೊಳ್ಳುವನು).

**ಕೃಷ್ಣಾತಾಯಿ:—** (ಧೈರ್ಯದಿಂದ ಮುಂದೆ ನಡೆದು ಬಂದು) ಮುದುಕರಿಗೆ ಸಮಾಧಾನ ಹೇಳದೆ— ನೀವೇ ತಲೆ ಹಿಡಿದುಕೊಂಡು ಕುಳಿತಿರಿ. ನಿಮ್ಮ ತಂಗಿಗೆ, ನಿಮ್ಮ ತಂದೆಯವರಿಗೆ ಯಾರು ಸಮಾಧಾನ ಹೇಳಬೇಕು ನೀವೇ ಹೀಗೆ ಮಾಡಿದರೆ?

**ರಾಮಣ್ಣ:—** (ಕಠೋರಸ್ವರದಲ್ಲಿ) ಮಕ್ಕಳ ಕುತ್ತಿಗೆ ಕೊಯ್ಯುವ ಅಧಿಕಾರವು ಎಂದಿಗೂ ತಪ್ಪಿಲ್ಲ ಎಂದು ಧರ್ಮವೆ ಅವರಿಗೆ ಸಮಾಧಾನ ಹೇಳುವದು.

**ಕೃಷ್ಣಾ ತಾಯಿ:—** (ಹಟದ ಹುಡುಗನನ್ನು ಹಾದಿಗೆ ತರುವವರಂತೆ) ಸಾಕು .. ಒಂದು ಮಾತಿಗೆ ಒಂದು ಕಲ್ಪನೆ ಬೆಳೆಸುವಿರಿ .. ಮಕ್ಕಳ ಕುತ್ತಿಗೆ ಕೊಯ್ಯುವದೆಲ್ಲಿಯ ಕಲ್ಪನೆ? .... ಪಾಪ! ತನ್ನ ಮೈಮೇಲೆಯ ಎಚ್ಚರವಿದ್ದಿಲ್ಲ ನಿಮ್ಮ ತಂಗಿಗೆ—

**ರಾಮಣ್ಣ:—** ಕೃಷ್ಣಾತಾಯಿ, ನನ್ನ ತಂಗಿಯ ವಿಷಯ ನಾನು ಮಾತನಾಡಿಲ್ಲ. ನನ್ನ ಮಾತು ಹೇಳಿದೆ, **ನಮ್ಮ** ಮಾತು ಹೇಳಿದೆ .... ನಾವೆಲ್ಲ ಪಾಪಿಗಳು, ಕಟುಕರು.

**ಕೃಷ್ಣಾ ತಾಯಿ:—** (ಮೇಲಿನಂತೆಯೆ) ಯಾರೂ ಕಟುಕರಿಲ್ಲ.

**ರಾಮಣ್ಣ:—**(ಒಮ್ಮೆಲೆ ಆವೇಶದಿಂದ) ಬೆಳೆಯುವ ಜೀವ ಕಡಿದೊಗೆ-ವರು ಕಟುಕರಲ್ಲವೆ? ಕೃಷ್ಣಾತಾಯೀ, ನನಗೆ ನನ್ನ ಮನೆಯ ದುಃಖವಿಲ್ಲ. ನನ್ನ ತಂಗಿಯಂತೆ ಸಮಾಜದಲ್ಲಿ ಎಷ್ಟು ತಾಯಂದಿರು ಸನ್ನಿಪಾತ ಸೇರಿ ತಮ್ಮ ಮಕ್ಕಳ ಕುತ್ತಿಗೆ ಕೊಯ್ಯುತ್ತಿರಲಿಕ್ಕಿಲ್ಲ ಎಂಬ ವಿಚಾರದಿಂದ ದುಃಖ,

**ಕೃಷ್ಣಾ ತಾಯಿ:—** ಇದೇನೆ? ಇವರು ಹೀಗೆ ದುಃಖಿಸುತ್ತ ಕುಳಿತರೆ ಸಮಾಜದ ಉದ್ಧಾರವಾದಂತೆಯೆ! ಸುಮ್ಮಸುಮ್ಮನೆ ಮಾತನಾಡಿ ಮನಸ್ಸು ನೋಯಿಸಿಕೊಂಡರೆ—

**ರಾಮಣ್ಣ:—** (ನಿರಾಶೆಯಿಂದ) ನಿಜ, ಕೃಷ್ಣಾತಾಯೀ, ಸುಮ್ಮ ಸುಮ್ಮನೆ ಮಾತನಾಡಿದ್ದಕ್ಕೆ ಇಂದು ನನ್ನ ಮನಸ್ಸು ನೋಯುವದು. ಮಾತನಾಡಿದೆ- ಮಾತನಾಡಿದೆ— ಕುತ್ತಿಗೆಕೊಯ್ಯುವಾಗಲೂ ಮಾತನ್ನೆ ಆಡಿದೆ.

**ಕೃಷ್ಣಾ ತಾಯಿ:—**(ಉದ್ವೇಗದಿಂದ) ತಾಯೀ, ಕುತ್ತಿಗೆಕೊಯ್ಯುವ ದೆಂಬ ಹುಚ್ಚು ಯಾಕೆ ಸೇರಿತೊ—

**ರಾಮಣ್ಣ:—**ಕೃಷ್ಣಾತಾಯೀ, ಕುತ್ತಿಗೆ ಎಂದರೆ ಕೇವಲ ಮಾಂಸ-ಎಲಬುಗಳ ಈ ಕೊಳವೆಯಲ್ಲ; ಜೀವಮಯವಾದ ಹವೆ ಹರಿದಾಡುವಂತಹ . . (ಒಮ್ಮೆಲೆ ಬೇಜಾರದಿಂದ) ಛೆ . . ನಿಮಗೆ ಯಾರಿಗೂ ತಿಳಿಯುಂತಿಲ್ಲ.... ನಿಮಗೆ ತಿಳಿದಿದ್ದರೆ ನೀವು ತಾಯಂದಿರೆ ಆಗುತ್ತಿರಲಿಲ್ಲ.... ತಿಳಿಯುವ ಮುಂಚಿತ ತಾಯಿಯಾದವರಿಗೆ ತಿಳಿಯುವ ವಿಚಾರವೇ ಅಲ್ಲ.... (ಹಟದಿಂದ) ಏನು ಮಾಡಲಿ? ಇವರಿಗೆ ತಿಳಿಯುವದೇ ಇಲ್ಲ .... ತಿಳಿಸದೆ ನನಗೆ ಸಮಾಧಾನವಿಲ್ಲ.

**ಕೃಷ್ಣಾತಾಯಿ:—** (ಮಗುವನ್ನು ಆಡಿಸುವ ತಾಯಿಯಂತೆ) ನಿಮ್ಮ ಸಮಾಧಾನಕ್ಕಾಗಿ ನಾನು ತಿಳಿದುಕೊಳ್ಳಲೆ?

**ರಾಮಣ್ಣ:—**(ಬೇಜಾರದಿಂದ ಕೂಗಿ) ಮಕ್ಕಳ ಕುತ್ತಿಗೆಕೊಯ್ಯುವ ಅನುಭವವಿದೆಯೆ ನಿಮಗೆ; ಅಧಿಕಾರವಿದೆಯೆ ನಿಮಗೆ? (ಕೃಷ್ಣಾತಾಯಿಯು ನಡುಗುವಳು). ಹಾಗಿಲ್ಲದಿದ್ದರೆ ನಿಮಗೆ ತಿಳಿಯುವದೇ ಇಲ್ಲ. (ಸಂತಾಪದಿಂದ ಹೆಚ್ಚಿಚ್ಚು ಚೀರುತ್ತ) ಹನ್ನೆರಡು ವಯಸ್ಸಿಗೆ ತಾಯಿಯಾಗಿ ಮಳೆಗಾಲದ ಮಾವಿನಹಣ್ಣಿನಂತಹ ಮಗುವನ್ನು ಮುದ್ದಾಡಿಸುವ ಹಿಂದು ಧರ್ಮದ ಗೃಹಿಣಿಗೆ ತಿಳಿಯುವದು ನಾನು ಹೇಳುವದು, ಕೃಷ್ಣಾತಾಯೀ, ನಿಮಗಲ್ಲ. ಹದಿನಾಲ್ಕು ವಯಸ್ಸಿಗೆ ತಾಯಿಯಾಗಿ ಮಗು ಎಂದರೆ ಚಳಿ ಎಂದು ನಡುಗುವ ಹಿಂದು ಸಾಧ್ವಿಗೆ ತಿಳಿಯುವದು ನಾನು ಹೇಳುವದು . . ಹದಿನಾರು ವಯಸ್ಸಿಗೆ ತಾಯಿಯಾಗಿ, ವಾತ್ಸಲ್ಯವೆಂದರೆ ಉತ್ಸಾಹವೆಂದರೆ ಬೇಸಗೆಯಲ್ಲಿ ಬತ್ತಿದ ಹೊಳೆಯಂತಿದ್ದ ಹಿಂದೂ ಧರ್ಮಪತ್ನಿಗೆ ತಿಳಿಯು-ವದು ನಾನು ಹೇಳುವದು, ನಿಮಗಲ್ಲ. ಇಪ್ಪತ್ತು ವಯಸ್ಸಿಗೆ ತಾಯಿ-ಯಾಗಿ, ದಶಾವತಾರಗಳನ್ನು ಧರೆಗಿಳಿಸಿ ಮಾತೃದೇವತೆ ಎನ್ನಿಸಿಕೊಂಡು ಮುತ್ತೈದೆತನದಲ್ಲಿ ಸ್ವರ್ಗಸೇರುವ ಪತಿವ್ರತಾ ಸತಿಯರಿಗೆ ತಿಳಿಯುವದು ನಾನು ಹೇಳುವದು.... (ಕಣ್ಣೀರು ಒರೆಸಿಕೊಳ್ಳುತ್ತ) ಕೃಷ್ಣಾತಾಯೀ, ನಿಮಗೆ ತಿಳಿಯುವಂತಿಲ್ಲ.

**ಕೃಷ್ಣಾತಾಯಿ:—** (ಕೆಣಕುವವಳಂತೆ) ತಿಳಿಯದೆ ಏನು? ನೀವು ಇಷ್ಟೊಂದು ಹೇಡಿಯಂತೆ ಮಾತನಾಡಿದರೆ ಎಲ್ಲರಿಗೂ ವಿಶ್ವಾಸ ಹುಟ್ಟು-

ವದು ನಿಮ್ಮ ಮಾತಿನಲ್ಲಿ. ಇದೇನೆ! ಬರೆಯುವವರು, ಸಭೆಯಲ್ಲಿ ಮಾತ-ನಾಡುವವರು ಅಂದರೆ ಹೀಗೆಯೆ!

**ರಾಮಣ್ಣ:—** (ವಿಷಾದದಿಂದ) ಹೀಗೆಯೆ; ನಾವೆಲ್ಲರೂ ಹೀಗೆಯೆ. ಸಭೆಯಲ್ಲಿ ಮಾತನಾಡುವೆವು, ಮನೆಯಲ್ಲಿಯು ಮಾತು ಮುಚ್ಚುವೆವು.

**ಕೃಷ್ಣಾತಾಯಿ:—** (ಮೇಲಿನಂತೆ) ತಮ್ಮ ಹೇಡಿತನ ಮುಚ್ಚಲು ತಾಯಂದಿರು ಹೇಡಿ ಅನ್ನುವದು.

**ರಾಮಣ್ಣ:—** (ಅವಳನ್ನು ದಿಟ್ಟಿಸಿ ನೋಡಿ) ತಾಯಂದಿರು **ಹೇಡಿ** ಎಂದುದಕ್ಕೆ ನಿಮಗೆ ಸಿಟ್ಟು ಬಂದಿತಲ್ಲವೆ?.. ತಾಯಂದಿರಷ್ಟೇ ಅಲ್ಲ; ತಂದೆ-ಯರೂ ಹೇಡಿ. ಹೊರಗೆ ಹೇಡಿಯಾದ ತಾಯ್ತಂದೆಗಳು ಒಳಗೆ ಹುಡುಗರನ್ನು ಹೆದರಿಸುವರು. ಅದಕ್ಕೆ ಹುಡುಗರೂ ಹೇಡಿ. ತಿಳಿಯಿತೆ, ಕೃಷ್ಣಾತಾಯೀ? ನನ್ನ ತಂದೆ ಹೇಡಿ, ಅದಕ್ಕಾಗಿ ನಾನು ಹೇಡಿ. ಧರ್ಮಕ್ಕೆ ಹೆದರಿ ಮಗಳನ್ನು ಹಾಳು ಮಾಡಿದ ತಂದೆ, ತಂದೆಗೆ ಹೆದರುವದು ಧರ್ಮವೆಂದು ತಂಗಿಯನ್ನು ಹಾಳುಮಾಡಿದೆ ನಾನು... ಹೇಡಿಯಾದುದರಿಂದಲ್ಲವೆ ನಾನು ಇದುವರೆಗೆ ಎಲ್ಲವನ್ನೂ ತಡೆದದ್ದು? ಹೇಡಿ ಎಂದೇ ನಾನು ಹೊರಗೆ ಓಡಿ ಸಭೆಯಲ್ಲಿ ಕೂಗುವದಿಲ್ಲವೆ? ಮನೆಯೊಳಗೆ ಕತ್ತಲೆ ಎಂದು ಹೆದರಿ, ಬೆಳಕಿನ ಬಯಲಿ-ನಲ್ಲಿ ಕಸಗುಡಿಸಬೇಕೆನ್ನುವ ನಾನು ಹೇಡಿಯೆ ಅಲ್ಲವೆ?.... ನಾನು ಹೇಡಿ. ಅದಕ್ಕೆಂದೇ ಕೊಲೆಗಡುಕತನದ ಪಾತಕ ಕಟ್ಟಿಕೊಂಡಿರುವೆ... ವೀರ-ನೊಬ್ಬನು ಒಂದು ಸೈನ್ಯವನ್ನಷ್ಟೆ ಕೊಲ್ಲಬಹುದು, ನನ್ನಂತಹ ಹೇಡಿ-ಯೊಬ್ಬನು ಸಮಾಜಕ್ಕೆ ಸಮಾಜವನ್ನು ಕೊಲ್ಲುವನು.

**ಕೃಷ್ಣಾತಾಯಿ:—** (ಸೋಗಿನಿಂದ) ಅಮ್ಮಯ್ಯ! ಸುಶಿಕ್ಷಿತ-ಸುಧಾ-ರಕರ ಮುಂದಾಳು ಹೇಡಿ ಎಂದು ಹೇಳಿಕೊಳ್ಳುವದು ಇವರಂತಹ ಬರೆ-ಯುವವರ ಚಾತುರ್ಯವಲ್ಲವೇನೆ!

**ರಾಮಣ್ಣ:—** (ಎದ್ದು ಎದುರಿಸಿ ಹಟದಿಂದ) ಕೃಷ್ಣಾತಾಯೀ, ನಿಮಗೆ ತಿಳಿಯುವದಿಲ್ಲವೆಂದು ಮೊದಲೇ ಹೇಳಿದ್ದಿಲ್ಲವೆ? ಸುಶಿಕ್ಷಿತನಾದರೂ ತಂದೆ-ತಾಯಿ ಬಿಟ್ಟಿಲ್ಲ.. ಎಲ್ಲಕ್ಕೂ ಮುಂಚಿನ ಶಿಕ್ಷಣವೆಂದರೆ ತಾಯಿಯ ಒಲೆ-

ಕಟ್ಟಿಗೆಯ ಬರೆ, ತಂದೆಯ ಕೈ-ಕಟ್ಟಿಗೆಯ ಗೆರೆ. ಕೃಷ್ಣಾತಾಯೀ, ನನಗೆ ಸುಶಿಕ್ಷಿತನೆನ್ನುವರು ತರುಣರು, ನಾನು ಸುಧಾರಕ ಎನ್ನುವರು ಹಳೆಬರು.. ಪಾಪ! ಅವರಿಗೇನು ಗೊತ್ತು? ಬಾಲ್ಯದಲ್ಲಿ, ಬಲಿಯುವ ಪ್ರತಿಯೊಂದು ಎಲುಬಿನಲ್ಲಿ ಪ್ರತಿಯೊಂದು ಎಳೆಯಲ್ಲಿ, ಪ್ರತಿಯೊಂದು ಕಣದಲ್ಲಿ ಹೇಡಿತನವು ನನ್ನಲ್ಲಿ ಹೆಣೆದಿದೆ ಎಂದು ಅವರಿಗೇನು ಗೊತ್ತು? ನಾನು ಬರಿಯ ತಂತಿಯ ಗೊಂಬೆಯೆಂದು ಅವರಿಗೇನು ಗೊತ್ತು? ನಾನು ಬಣ್ಣದ ಗೊಂಬೆ ಎಂದು ಅವರಿಗೇನು ಗೊತ್ತು? ತಂತಿಯು ಹರಿದ ಮೇಲೆ, ಬಣ್ಣವು ಬತ್ತಿದ ಮೇಲೆ— ನಾನು ಕಟ್ಟಿಗೆಯ ಗೊಂಬೆ. ನನ್ನ ತಂದೆ-ತಾಯಂದಿರು ಕೆತ್ತಿದ ಕಟ್ಟಿಗೆಯ ಗೊಂಬೆ. ಗೊಂಬೆ ಎಂದೇ ತೊಡೆದ ಬಣ್ಣವೆಲ್ಲ ನನ್ನದೇ ನಿಜಸ್ವರೂಪ ಎಂದು ತಿಳಿದಿರುವೆ. ಗೊಂಬೆ ಎಂದೇ ಇದುವರೆಗೆ ನಿಶ್ಚೇಷ್ಟನಾಗಿ ಬಿದ್ದುಕೊಂಡಿರುವೆ. ನನ್ನಂತಹ ಗೊಂಬೆಯನ್ನು ಕೆತ್ತಿದ ಸುತ್ತಿಗೆಯೆ ನನ್ನನ್ನು ಕಡಿದೊಗೆವ ಹೆದರಿಕೆ ನನಗೆ. ಆದರೂ ಓಡಿಹೋಗುವಂತಿಲ್ಲ.. ಹೇಡಿ ನಾನು. ಇಂದು ನಾನು ಓಡಿಹೋದರೆ ನನ್ನ ತಂಗಿಯನ್ನು ಉಳಿಸುವರಾರು ಎಂಬ ಹೆದರಿಕೆ; ಓಡುವ ನನ್ನ ಕಾಲುದೂಳಿಯಿಂದ ನನ್ನ ಮನೆಯು ಮುಚ್ಚುವದೆಂಬ ಹೆದರಿಕೆ ನನಗೆ.. ಆದರೂ ನಿಲ್ಲಬೇಕೆಂದರೆ ಹೆದರಿಕೆ.... ಹೆದರಿದರೂ ಬಾಳಬೇಕೆಂದು ಅಭಿಮಾನ ತಾಳುವ ಯಾವ ಸಂಗತಿ ಉಳಿದಿದೆ? ಕಾಮುಕ ತಂದೆ—

**ಕೃಷ್ಣಾತಾಯಿ:**—(ಗಾಬರಿಗೊಂಡು) ಇದೇನು? ಏನು ಮಾತ—

**ರಾಮಣ್ಣ:**—(ಹೆಚ್ಚಾಗಿ ಒದರಿ) ಕಾಮುಕ ತಂದೆ, ತನ್ನ ಕಾಮುಕತನ ಮುಚ್ಚಲು ತಾಳಿದ ಆ ಸಂತಾನ-ಸಂಯಮದ, ಆ ಸಮಾಜ-ಸುಧಾರಣೆಯ ಸೋಗು, ನಿಮ್ಮಿಬ್ಬರ—

**ಕೃಷ್ಣಾತಾಯಿ:**—(ಕಳವಳಗೊಂಡು) ಅಮ್ಮಯ್ಯ! ಏನು ಮಾತ—

**ರಾಮಣ್ಣ:**—(ಮೊದಲಿನಂತೆ) ನಿಮ್ಮಿಬ್ಬರ ಆ ಸೋಗು ಹೊರಬಿದ್ದೀತೆಂದು ಹೆದರಿ ಇಂದು ನನ್ನ ತಂಗಿಯ ಕೂಸನ್ನು, ನನ್ನ ಜೀವವನ್ನು ಆಹುತಿ ಮಾಡಿದ್ದು.. ಇದಕಾಗಿ ಅಭಿಮಾನ ತಾಳಲೆ?

**ಕೃಷ್ಣಾ ತಾಯಿ:—** ( ಕಂಗೆಟ್ಟು ) ಇವರಿಗೆಲ್ಲಿಂದ ದುರ್ಬುದ್ಧಿ ಬಂದಿತೆ ?

**ರಾಮಣ್ಣ :—** ದುರ್ಬುದ್ಧಿ ಬಂದಿತೆಂದೇ ಹೊರಗೆ ಅತ್ಯಾಚಾರವೆಂದೆ, ಧರ್ಮವೆಂದರೆ ಬಲಾತ್ಕಾರವೆಂದು ಬೊಬ್ಬಿರಿದೆ, ಮನೆಯೊಳಗಿನ ವ್ಯಭಿಚಾರವನ್ನು—

**ಕೃಷ್ಣಾ ತಾಯಿ:—** ( ಉದ್ವೇಗದಿಂದ ) ನಿಮ್ಮ ಹಿತಕ್ಕೆ ಹೇಳುವೆ, ಕೈಮುಗಿಯುವೆ, ಕೆಟ್ಟ ಕಲ್ಪನೆ ಮಾಡಬೇಡಿರಿ.. ಇಂದೇಕೆ ಇಂತಹ ಅಸಂಬದ್ಧ, ಅವಾಚ್ಯ ಶಬ್ದ ಆಡುವಿರೆ ?

**ರಾಮಣ್ಣ :—** ( ಕೆರಳಿ ) ಜಗತ್ತಿನಲ್ಲಿ ಅಸಂಬದ್ಧ, ಅಕಾರ್ಯ-ಕೃತ್ಯಗಳಿಗಾಗಿ ಬೇರೆ ಶಬ್ದಗಳಿಲ್ಲವೆಂದು.. ಇಂದು ನನ್ನ ಹೇಡಿತನ ಬೀಸಾಡುವ ನಿಶ್ಚಯ ಮಾಡಿರುವೆನೆಂದು.. ( ಅಣಕಿನಿಂದ ) ಇಂದು ಮಾತಾಡುವದು ತಪ್ಪಾಯಿತಲ್ಲವೆ? ೮-೧೦ ವರ್ಷಗಳ ಹಿಂದೆ—ಎಂದು ನನ್ನ ತಂದೆಯಿಂದ ಹಣಸಂಪಾದನೆಯನ್ನು ಹೂಡಿದೆ ಅಂದೇ— ಹೇಳಬೇಕಾಗಿತ್ತಲ್ಲವೆ ?.... ಎಂತಹ ಕಟುಕ ನಾನು ! ಅಂದು ಹೇಳಲಿಲ್ಲವೆಂದು ಇಂದು ನಿಮ್ಮೆಲ್ಲರ ಜೊತೆಗೆ ಕೊಲೆಗಡುಕತನದ ಪಾತಕ ಕಟ್ಟಿಕೊಂಡೆನಲ್ಲ ! ಸ್ವಾರ್ಥಸಾಧುಗಳ ಜೊತೆಗೆ ! ಸಮಾಜ ವಂಚಕರ ಜೊತೆಗೆ ! ಡಾಂಭಿಕನ ಜೊತೆಗೆ ! ಜಾರಿಣಿಯ ಜೊತೆಗೆ !

**ಕೃಷ್ಣಾ ತಾಯಿ:—** ( ಮುಖ ಮುಚ್ಚಿಕೊಂಡು ಚೀರುತ್ತ ) ಬೇಡ— ಅಲ್ಲ— ಅಲ್ಲ—

**ರಾಮಣ್ಣ :—** ( ಕೋಪವೇರಿ ಮುಖಮುಚ್ಚಿದ ಅವಳ ಕೈಯನ್ನು ಎಳೆಯುತ್ತಾ ) ಅಲ್ಲವೆ ? ನೀನು ಜಾರಿಣಿಯಲ್ಲವೆ ? ಮಹಾಸಾಧ್ವಿ ! ಪತಿ-ವ್ರತೆ! ನನ್ನಂತಹ ಪಾಪಿಯನ್ನು ನೋಡಿದರೆ ನಾನು ಸುಟ್ಟುಹೋಗಬಹುದೆಂದು ಹೆದರಿ ಮುಖವನ್ನು ಮುಚ್ಚಿಕೊಂಡಿರುವೆಯಲ್ಲವೆ ? ( ಎರಡೂ ಕೈಗಳನ್ನು ಬಲವಾಗಿ ಎಳೆಯಲು ಅವಳ ಕನ್ನಡಕವು ಕೆಳಗೆ ಬೀಳುವದು. ಅದನ್ನು ಎತ್ತಿ ಹಿಡಿಯುವನು. ಕೃಷ್ಣಾತಾಯಿಯು ಮತ್ತೆ ಮುಖವನ್ನು ಮುಚ್ಚಿಕೊಳ್ಳುವಳು ).

ಯಾಕೆ? ಜಗತ್ತನ್ನು ಮೋಸಮಾಡಬೇಕೆಂದು ತಗಲಿಸಿರುವ ಈ ನಿನ್ನ ದಿವ್ಯದೃಷ್ಟಿ, ಈ ನಿನ್ನ ಪಾತಿವ್ರತ್ಯದ ಶಾಪಕಟಾಕ್ಷ, ಬೇಡವೆ?

**ಕೃಷ್ಣಾತಾಯಿ:—** (ಮುಖಮುಚ್ಚಿಕೊಂಡು ಬಿಕ್ಕುತ್ತ) ನಿಮ್ಮ ತಂಗಿಯ ಆಣೆಯಾಗಿದೆ.. ನಿಮ್ಮ ಹಿತಕ್ಕೆ ಹೇಳುವೆ..

**ರಾಮಣ್ಣ:—** (ಅಣಕಿಸಿ) ನನ್ನ ತಂಗಿಗೆ ತಂದ ಹಿತವನ್ನೆ ನನಗೂ ಕಾದಿಟ್ಟಿರುವಿರಲ್ಲವೆ? ನಿನ್ನ ಹಿತಬುದ್ಧಿಗೆ ಎದುರಿಸುವ ಧೈರ್ಯವಿಲ್ಲವೆ?.. ಇದೊ, ನಿನ್ನ ಕಣ್ಣೊಳಗೆ ತುಂಬಿ ತುಳುಕುವ ನನಗಾಗಿರುವ ಹಿತದ, ಮಮತೆಯ ಧಾರೆಯು ಪ್ರವಾಹವಾಗಿ ಹರಿದೀತು! ತಡೆ—

**ಕೃಷ್ಣಾತಾಯಿ:—** (ಮುಖವನ್ನು ತೆರೆದು) ದೇವರು ನಿಮಗೆ ಸದ್ಬುದ್ಧಿಯನ್ನು ಕೊಡಲಿ (ಎಂದು ಅವನ ಕೈಯೊಳಗಿನ ಕನ್ನಡಕವನ್ನು ತೆಗೆದು ಕೊಳ್ಳುವಳು. ಅವನು ಅವಳನ್ನು ಒಂದೇ ಸಮನೆ ದಿಟ್ಟಿಸುವನು. ಅವಳಿಗೆ ತಿಳಿಯುವದಿಲ್ಲ, ಹೆದರಿಕೆಯಾಗುವದು, ಕನ್ನಡಕವನ್ನು ಹಾಕಿಕೊಳ್ಳುವಳು. ಅವನು ಇನ್ನೂ ದಿಟ್ಟಿಸಲು ಒಮ್ಮೆಲೆ ಹೊರಡುವಳು).

**ರಾಮಣ್ಣ:—** (ತಟ್ಟನೆ ಅವಳನ್ನು ತಡೆದು, ಎದುರು ನಿಲ್ಲಿಸಿ, ದಿಟ್ಟಿಸುತ್ತಲೆ ಚೀರುವನು) ಅಯ್ಯೊ!.... ಇವಳ.. ಕ–ಣ್ಣಿ–ನ–ಲ್ಲಿ ಹು–ವ್ವು.. ಅತ್ತೆ, ಅತ್ತೆ (ಎಂದು ವಿಕಾರವಾಗಿ ಕೂಗುವನು. ಅವಳು ಕೈ ಕೊಸರಿಕೊಂಡು ಹೋಗಲು ಯತ್ನಿಸುವಳು. ಇಷ್ಟರಲ್ಲಿ ಗುರುಸಿದ್ಧನು ಬರುವನು).

**ಗುರುಸಿದ್ಧ:—** (ಓಡುತ್ತ ಬಂದು ಗಾಬರಿಯಿಂದ) ಬಂದೆ, ರಾಮಣ್ಣಾ, ಬಂದೆ, ರಾಮಣ್ಣಾ ರಾಮಣ್ಣರಾಯರ— ಏನಾಯ್ತು? (ರಾಮಣ್ಣನು ಹಾಗೆಯೆ ನಿಲ್ಲುವನು. ಕೃಷ್ಣಾತಾಯಿಯು ದೂರ ಸರಿದು ನಿಲ್ಲುವಳು. ಗುರುಸಿದ್ಧನಿಗೆ ಏನೂ ತಿಳಿಯದೆ, ಹೆದರಿಕೆಯಿಂದ ರಾಮಣ್ಣನನ್ನೆ ನೋಡುತ್ತ ನಿಲ್ಲುವನು).

**ಕೃಷ್ಣಾತಾಯಿ:—** (ಸಮಾಧಾನ ತೋರಿಸುವ ಹವಣಿಕೆಯಿಂದ) ಏನೂ ಇಲ್ಲ.... ಅಂ.. ಜನರು ಹೋಗಿ ಬರೋ ಗಲಾಟೆ ಬಹಳ ಆಗೋದು.. ರಾಯರು.... ಅಲ್ಲಾ, ಯಾರಾದರೂ ಬಂದರೆ ರಾಯರ ಮೈಯಲ್ಲಿ ನೆಟ್ಟಗಿಲ್ಲ

ಅಂತ.... ಇದು ನೋಡೊ (ಒಮ್ಮೆಲೆ ದರ್ಪದಿಂದ) ಒಬ್ಬರನ್ನೂ ಒಳಗೆ ಬಿಡಬೇಡ, ತಿಳಿಯಿತೆ ?

**ಗುರುಸಿದ್ಧ:—** (ದಂಗುಬಡಿದನಂತೆ ಉಸುರ್ಗರೆದು) ಉಶ್ ಯಪಾ ; ಇಷ್ಟೇ ಹೌದಲ್ಲೊ ? (ರಾಮಣ್ಣನು ಅಸಹ್ಯ ತೋರಿಸಿ ಕಟ್ಟೆಯ ಮೇಲೆ ಕುಳಿತುಕೊಳ್ಳುವನು). ಹೋಗಿ ಬರುವ ಜನಾ ಅಂದರ ಕೇಳಬ್ಯಾಡರಿ ! ಕಾಗೆ ಬರತಾವಲ್ಲ ಸತ್-ಅಂ-ಕೆಟ್ಟ ಯಾಳೇಕ, ಹಾಂಗ ಮುತ್ತಿ ಬಿಡತಾರ.. ನೋಡಬಾರದ ಒಳಗ ? ಯಾರಿಲ್ಲಾ ಅಂದರ ನಮ್ಮ ಗೋಪಾಲಾಚಾರಿ, ಅವನ ಹುಡುಗ ಯಂಕಾಚಾರಿ— ಹೊರಗಿನ ಕೆಲಸ ಮುಗಿಸಿಕೊಂಡು ಕಡಿದಾಡಲಿಕ್ಕೇ ಇಲ್ಲಿ ಬರತಾರೇನೊ ?.. ಛಿ, ಹೀಂಗ ಕಡಿದಾಡೋ ಅಪ್ಪ-ಮಗನ್ನ ಎಲ್ಲೀ ನೋಡಲಿಲ್ಲ ಬಿಡು.

**ಕೃಷ್ಣಾತಾಯಿ:—** (ತಡೆಯದೆ) ಇರಲಿ ಬಿಡೊ ! ಎಷ್ಟು ಮಾತಾಡುವೆ ನೀನು ?.. ರಾಯರು ಹೊರಗಿನಿಂದ ಬಂದರೇನು ?

**ಗುರುಸಿದ್ಧ:—** ಬಂದಾರ್ರಿ.. ಪಾಪ! (ಅಧೈರ್ಯದಿಂದ ರಾಮಣ್ಣನನ್ನು ನೋಡಿ, ಕೃಷ್ಣಾತಾಯಿಯ ಹತ್ತಿರ ಬಂದು ಮೆಲ್ಲಗೆ) ಪಾಪ ! ಇಂಥಾ ಕೆಲಸ ಎಂದೂ ಮಾಡಿದವರಲ್ಲ —

**ಕೃಷ್ಣಾತಾಯಿ:—** (ಸಿಟ್ಟಿನಿಂದ) ಏನೊ ? ಮುದಿಹುಚ್ಚು ಹಿಡಿದಿದೆಯೇನು ನಿನಗೆ ?

**ಗುರುಸಿದ್ಧ:—** (ಇನ್ನಿಷ್ಟು ಮೆಲ್ಲಗೆ) ನನಗೇನು ಗೊತ್ತರಿ ? ಅವರೇ ಹೇಳಿದರು " ಇವರದೆಲ್ಲ ಕೈ ಬೆಚ್ಚಗೆ ಮಾಡೋವಾಗ ನನ್ನ ಕೈ ತಣ್ಣಗಾಗಿ ಹೋಗಿತ್ತು " ಅಂತ—

**ಕೃಷ್ಣಾತಾಯಿ:—** (ಹೊರಡುತ್ತ, ಸಿಟ್ಟಿನಿಂದಾದರೂ ಒಳ ಉಸಿರಿನಲ್ಲಿ) ನಿನ್ನ ನಾಲಗೆ ತಣ್ಣಗ ಮಾಡಿಸತೀನಿ ನೀನು ಬಾಯಿಮುಚ್ಚಲಿಲ್ಲಾ ಅಂದರೆ! (ಹೋಗುವಳು).

**ಗುರುಸಿದ್ಧ:—** (ನಿರಾಶೆಯಿಂದ) ಎಲ! ಮನೆಮಂದಿ ಎಲ್ಲ ನನಗೇ ಬೈತಾರಲ್ಲ ಮತ್ತೆ !

**ರಾಮಣ್ಣ:—** ( ಒಮ್ಮೆಲೆ ) ಯಾರೊ ?

**ಗುರುಸಿದ್ಧ:—** ( ಇಷ್ಟರಲ್ಲಿಯೆ ರಾಮಣ್ಣನು ಅಲ್ಲಿಯೆ ಇದ್ದುದನ್ನು ಮರೆತಿದ್ದು ಈಗ ಎಚ್ಚತ್ತವನಂತೆ) ಅಲ್ಲರಿ- ಮಾತು ಹೇಳಿದೆ- ಕೃಷ್ಣಾತಾಯಿ ಏನೊ ಸಿಟ್ಟುಮಾಡಿದರು ನನಗ—

**ರಾಮಣ್ಣ:—** ( ನಡುವೆಯೆ ) ಅವರು ನಮ್ಮ ಮನೆಮಂದಿ ಆಗಿ ಎಷ್ಟು ದಿವಸ ಆಯಿತೊ ?

**ಗುರುಸಿದ್ಧ:—** ( ತಿಳಿಯದೆ ) ಅದ್ಯಾಕರಿ ! ಅವರು ಎಂದಿನಿಂದಲೂ ಮನೆಯವರೇ ಇದ್ಧಾಂಗ ಇದ್ದಾರ್ರಿ.

**ರಾಮಣ್ಣ:—** ( ಗದ್ದರಿಸಿ ) ಈ ಮನೆಯೊಳಗೆ ಯಾರು ಅವರು ?

**ಗುರುಸಿದ್ಧ:—** ( ಬೆದರಿ ) ಅದ್ಯಾಕರಿ ? ಮನೆಗೆ ಮಗಳು ಇದ್ಧಾಂಗ ಕೃಷ್ಣಾತಾಯಿ .... ಅಂ· · ರಾಯರಿಗೆ ನೀವು ಹ್ಯಾಂಗ ಹಾಂಗೇ ಕೃಷ್ಣಾತಾಯಿ.... ನಿಮಗ ಹ್ಯಾಂಗ ಸಾಲೆ ಬರೆಸಿದರು ಹಂಗೇ ಅವರಿಗೂ ಸಾಲೇ ಬರೆಸಿ—

**ರಾಮಣ್ಣ:—** ( ಹೆಚ್ಚಾಗಿ ಗದ್ದರಿಸಿ ) ಏನು ? ಆಕೆ ಏನು ಇದ್ದಾಳೆ ಗೊತ್ತಿದೆಯೆ ?

**ಗುರುಸಿದ್ಧ:—** ( ತಪ್ಪಿಸಿಕೊಳ್ಳಬೇಕೆಂದು ) ಏನಿದ್ದರ ಏನಾಯ್ತರಿ ? ಅವರಿಗ ಹಾದಿಗ ಹಚ್ಚಿದವರು ರಾಯರು .... ಎಲ ಇವನ ! (ಎಂದು ಒಳಗೆ ನೋಡುವನು. ಗೋಪಾಲಾಚಾರ್ಯನೂ ವೆಂಕಾಚಾರಿಯೂ ಬರುವರು. ಗೋಪಾಲಾಚಾರ್ಯನು ಮುಂದೆ; ಆದರೆ ಸಿಟ್ಟಿನಿಂದ ತಿರುತಿರುಗಿ ಮಗನ ಮೇಲೆ ಮಳೆ ಸುರಿಸುತ್ತಿರುವನು ).

**ಗೋಪಾ:—** ( ಸಿಟ್ಟಿನಿಂದ ನಡುಗುತ್ತ ) ನೀನು ನೀಚ— ಯಾಕೆಂತೆಂದರೆ—

**ವೆಂಕ:—**( ತಡೆದು ) ಯಾಕೆಂತೆಂದರೆ ನಿಮ್ಮ ಮಗ ನಾನು, ಅಲ್ಲವೆ?

**ಗೋಪಾ:—** (ಮೇಲಿನಂತೆ) ಎಲ ತುಂಟಾ! ರಾಯರ ಮನೆ ಎಂದು ಸುಮ್ಮನಾಗುವೆ. ಯಾಕೆಂತೆಂದರೆ ಮನೆಯಲ್ಲಿ ಹೀಗೆ ಮಾಡಿದ್ದರೆ ಸೀಳಿ ಸೀಳಿ– ಯಾಕೆಂತೆಂದರೆ— (ತಡೆಯದೆ) ಅಯ್ಯೊ! ಏನು ಮಾಡಲಿ ಇವನಿಗೆ?

**ಗುರುಸಿದ್ಧ:—** (ತನ್ನಷ್ಟಕ್ಕೆ ಮಾತಾಡುವವನಂತೆ) ನನ್ನ ಹುಡುಗ ಹೀಗ ಮಾಡಿದ್ದರ—

**ವೆಂಕ:—** (ಒಮ್ಮೆಲೆ ತಿರುಗಿನಿಂತು— ತಿರಸ್ಕಾರದಿಂದ) ಏನು ಮಾಡುತ್ತಿದ್ದೆ?

**ಗುರುಸಿದ್ಧ:—** (ಕೆರಳಿ) ಉರುಲು ಹಾಕ್ಕೊಂಡು ಸಾಯ್ತಿದ್ದೆನೊ ಯಪ್ಪ!.. ಥೂ, ಇದು ನೋಡು (ಹೋಗುವನು).

**ರಾಮಣ್ಣ:—** ಏನದು, ವೆಂಕಾಚಾರಿ?

**ಗೋಪಾ:—** (ಅತ್ಯಂತ ತಿರಸ್ಕಾರದಿಂದ) ಮಾತಾಡಿಸಬೇಡ, ರಾಮಣ್ಣಾ, ಅವನನ್ನು, ಯಾಕೆಂತೆಂದರೆ—

**ವೆಂಕ:—** (ನಿರ್ಧಾರದಿಂದ) ನಾನು ಬಂದದ್ದು ಮಾತಾಡಲಿಕ್ಕೆ, ಮಾತಾಡಿಸಿಕೊಳ್ಳಲಿಕ್ಕೆ ಅಲ್ಲ.. (ರಾಮಣ್ಣನಿಗೆ) ಈ ಹೊತ್ತು ನೀವು ಸಭೆಗೆ ಬರುವ ಕಾರಣವಿಲ್ಲ.

**ರಾಮಣ್ಣ:—** (ನೊಂದುಕೊಂಡವನಂತೆ) ಯಾಕೆ?... ನನ್ನ ವಿಷಯ ಚಿಂತೆಬೇಡ, ವೆಂಕಾಚಾರಿ.. ಬರುವೆ, ಎಷ್ಟೊಂದು ಅನಾನುಕೂಲವಿದ್ದರೂ ಬರುವೆ.

**ವೆಂಕ:—** (ಮೇಲಿನಂತೆ) ಅದೇನೂ ಇಲ್ಲ. ಆದರೆ ನೀವು ಬರುವ ಕಾರಣವಿಲ್ಲ.

**ರಾಮಣ್ಣ:—** (ಸಂಶಯದಿಂದ) ಯಾಕೆ? .. ಸಭೆ ಮುಂದೆ ಹಾಕಿದೆಯೇನೊ?

**ವೆಂಕ:—** (ಹಟದಿಂದ) ಛೆ— ಅದೆಂದಿಗೂ ಶಕ್ಯವಿಲ್ಲ.

**ಗೋಪಾ:—** ( ತಿರಸ್ಕಾರದಿಂದ ) ಮನೆಗೆ ಬೆಂಕಿ ಹತ್ತಿದರೂ ಪರವಾ ಇಲ್ಲ- ಯಾಕೆಂತೆಂದರೆ—

**ವೆಂಕ:—** ( ನಡುವೆಯೆ ) ಮನೆಗೆ ಬೆಂಕಿಹಚ್ಚುವದೇ ನಮ್ಮ ಸಭೆಯ ಉದ್ದೇಶವಿದೆ.

**ಗೋಪಾ:—** ( ಕೆರಳಿ ) ಒಳಗಿನ ಮಂದಿಗೂ— ಯಾಕೆಂತೆಂದರೆ ಮನೆಯೊಳಗಿನವರಿಗೂ— ಬೆಂಕಿಹಚ್ಚಿಬಿಡಿರಿ.

**ವೆಂಕ:—** ( ಆಣಕಿನಿಂದ ) ಅದೇ ನಮ್ಮ ಸನಾತನ ವೈದಿಕಧರ್ಮ ವಲ್ಲವೆ? ಗಂಡಸತ್ತ ಹೆಂಡತಿಯನ್ನು ಬೆಂಕಿಯಲ್ಲಿ ಒಗೆಯುವದು ಧರ್ಮ ವಲ್ಲವೆ? ಅದರಂತೆಯೆ ಹೆಂಡತಿ ಸತ್ತ ಗಂಡನನ್ನೂ ಬೆಂಕಿಯಲ್ಲಿ ಒಗೆಯು ವದು ಧರ್ಮ.

**ಗೋಪಾ:—**(ತಡೆಯದೆ) ಎಲ-(ಎಂದು ಮಾತುಸಾಲದೆ ಕುಣಿಯುವನು.)

**ರಾಮಣ್ಣ:—** ( ಸಿಟ್ಟಿನಿಂದ ಗೋಪಾಲಾಚಾರ್ಯನಿಗೆ ) ಸುಮ್ಮನಿರ ಬಾರದೆ ನೀವು?.. ಇಲ್ಲವಾದರೆ ಹೊರಟು ಹೋಗಿರಿ. ನಿಮ್ಮದೇನಿದೆ ಇಲ್ಲಿ?

**ಗೋಪಾ:—** ( ಕನಿಕರದಿಂದ ) ರಾಮಣ್ಣಾ, ಹಾಗೆನ್ನಬೇಡ. ಯಾಕೆಂತೆಂದರೆ— ಈ ತುಂಟ ನನಗೆ ಆಡಿಕೊಂಡರೆ ಸುಮ್ಮನಿರುವೆ— ಯಾಕೆಂತೆಂದರೆ ಅದು ಅವನನ್ನು ಹಡೆದ ತಪ್ಪಿಗಾಗಿ. ಆದರೆ (ಉದ್ವೇಗ ದಿಂದ) ರಾಯರಿಗೆ- ಯಾಕೆಂತೆಂದರೆ ಆಕಳಿನಂತಹರು ಅವರು- ಅವರಿಗೆ ಈ ನೀಚ—

**ವೆಂಕ:—** ( ರಾಮಣ್ಣನ ಹತ್ತಿರ ಬಂದು ) ನಾನೇ ಹೇಳುವೆ. **ನೀವು ಸಭೆಗೆ ಬರುವ ಕಾರಣವಿಲ್ಲ.** ( ತಂದೆಯ ಕಡೆಗೆ ನೋಡಿ ) ಯಾಕೆಂತೆಂದರೆ ( ರಾಮಣ್ಣನನ್ನು ಎದುರಿಸುತ್ತ ) ಸಂಘದವರಿಗೆ ಇನ್ನು ಮುಂದೆ ನಿಮ್ಮಲ್ಲಿ ವಿಶ್ವಾಸವಿಲ್ಲವೆಂದು—

**ರಾಮಣ್ಣ:—** ( ಆಶ್ಚರ್ಯದಿಂದ ) ಏನು- ಏನು! ವೆಂಕಾಚಾರೀ, ನೀನು ಹೀಗೆ ಹೇಳುವೆಯಾ?

**ವೆಂಕ:—** (ಗಾಂಭೀರ್ಯವನ್ನು ತಾಳಿ) ಹಾಗೆ ಮೊದಲು ನಾನು ಹೇಳಲಿಲ್ಲ. ನನಗೆ ಯಾವದೂ ಗೊತ್ತಿರಲಿಲ್ಲ. (ರಾಮಣ್ಣನು ಚಕಿತನಾಗಿ ತನ್ನನ್ನು ನೋಡಲು) ನಿಮ್ಮ ಸೋದರತ್ತೆಯ ಗಂಡನು ಅವರನ್ನು ಕ್ರೂರ-ತನದಿಂದ ನಡೆಸಿಕೊಂಡದ್ದು ನನಗೆ ಗೊತ್ತಿರಲಿಲ್ಲ.

**ಗೋಪಾ:—** (ಅಣಕಿನಿಂದ) ಯಾಕೆಂತೆಂದರೆ ನಿನ್ನಂತೆ ಎಲ್ಲರೂ ಮನೆಯ ಸುದ್ದಿ ಮೈದಾನದೊಳಗೆ ಊದುತ್ತಿರುವದಿಲ್ಲ.. ಗೊತ್ತಿರಲಿಲ್ಲ ವಂತೆ! ಯಾಕೆಂತೆಂದರೆ ಮಂದಿಯ ಮನೆಯ ಸುದ್ದಿ ತನಗೆಯಾಕೊ! ಗೇಣುದ್ದ ಹುಡುಗ!

**ವೆಂಕ:—** (ಗದ್ದರಿಸಿ) ನಿಮ್ಮ ಮಾರುದ್ದ ನಾಲಗೆ ತಡೆಯಬಾರದೆ? (ಗೋಪಾಲಾಚಾರ್ಯನು ಬೆಪ್ಪಾಗಿ ಬಾಯಿ ತೆರೆಯುವನು) (ಮತ್ತೆ ರಾಮಣ್ಣನಿಗೆ ಕೊಂಚ ದ್ವೇಷದಿಂದ) ಕ್ರೂರತನದಿಂದ ಬಿಟ್ಟದ್ದಲ್ಲದೆ ಮತ್ತೊಂದು ಮದಿವೆ ಮಾಡಿಕೊಂಡನಂತೆ. ಆಗ ನೀವು—

**ರಾಮಣ್ಣ:—** (ಸಂದರ್ಭ ತಿಳಿಯದೆ) ಅಲ್ಲೊ— ವೆಂಕಾಚಾರೀ— ನಮ್ಮ—

**ವೆಂಕ:—** (ದ್ವೇಷದಿಂದ ಗದ್ದರಿಸುತ್ತ) ನಿಮ್ಮ ಸೋದರತ್ತೆ ನಿಮಗೆ ತಾಯಿಯ ಸಮಾನ; ನಿಮ್ಮ ಸೋದರತ್ತೆ ನಿಮ್ಮ ಹಿತದ ಹಿರಿಯರು! ಅಲ್ಲವೆ? ಗೊತ್ತಿದೆ, ಜಗತ್ತಿನಲ್ಲಿ ಯಾರಿಗೂ ತಾಯಿ ತಪ್ಪಿಲ್ಲ, ಯಾರಿಗೂ ಹಿರಿಯರು ಬಿಟ್ಟಿಲ್ಲ.

**ರಾಮಣ್ಣ:—** (ಅಸಮಾಧಾನದಿಂದ) ಅದಲ್ಲೊ, ವೆಂಕಾಚಾರೀ, ನಾನು ಹೇಳುವದು.. (ಏನು ಹೇಳಬೇಕೆಂಬುದು ತಿಳಿಯದೆ) ನಾನು ಏನಾ-ದರೂ ಗಲಾಟೆ ಎಬ್ಬಿಸಿದ್ದರೆ ಅವನು ನನ್ನ ಸೋದರತ್ತೆಯನ್ನು ಮನೆಯಲ್ಲಿಯೆ ಇಟ್ಟುಕೊಂಡು ಹೆಚ್ಚಾಗಿ ಪೀಡಿಸಬಹುದು ಎಂದು—

**ವೆಂಕ:—** (ಅಣಕಿನಿಂದ ಮಾತು ಮುಗಿಸುತ್ತ)— ಎಂದು ನೀವು ಪೀಡೆಯು ಹೆಚ್ಚುವಂತೆ ಮನೆಯಲ್ಲಿಯೆ ಕೈಮುಗಿದು ಕುಳಿತುಕೊಂಡಿರಿ!

**ರಾಮಣ್ಣ:—** (ಅಧೈರ್ಯದಿಂದ) ಅಲ್ಲ.... (ಒಮ್ಮೆಲೆ ಕೂಗಿ) ಸುಳ್ಳು—ಸುಳ್ಳು—

**ವೆಂಕ :—** ( ಹೆಚ್ಚಾಗಿ ಕೂಗುತ್ತ ) ಅದರಂತೆಯೆ ಹೆಚ್ಚಿನ ಪೀಡೆ ತಪ್ಪಿಸಬೇಕೆಂದೇ ಮದಿವೆಯ ಹೆಂಡತಿಯನ್ನು ಮನೆಯಿಂದ ಹೊಡೆದೋಡಿಸಿದಿರಲ್ಲವೆ ?

**ರಾಮಣ್ಣ :—** ( ರೇಗಿಸಿಂದ ) ಮೂರ್ಖಾ ! ಅವಳು ನನ್ನ ಮದಿವೆಯ ಹೆಂಡತಿಯಲ್ಲ; ನಾನು ಮನುಷ್ಯನಾಗುವ ಮೊದಲು ನನಗೆ ಕಟ್ಟಿದ—

**ವೆಂಕ:—** ಹಾಗಿದ್ದರೆ ನಿಮ್ಮ ಒಪ್ಪಿಗೆಯೆ ಆ ಹುಡುಗಿ ಇನ್ನೊಂದು ಮದಿವೆ ಮಾಡಿಕೊಂಡರೆ ?

**ಗೋಪಾ:—** ( ಮತ್ತೆ ಕುಣಿಯುತ್ತ ) ಎಲೊ, ದೈತ್ಯಾ—

**ವೆಂಕ:—** ( ನಮ್ರತೆಯ ಸೊಗಸಿನಿಂದ ) ದೈತ್ಯನಾದ ಪ್ರಲ್ಹಾದ ನಾನು. . ತಂದೆಯೆ, ದೈತ್ಯರ ಸಾರ್ವಭೌಮನಾದ ಹಿರಣ್ಯಕಶ್ಯಪ ದೊರೆಯೆ, ಆಜ್ಞೆಯಾಗಲಿ.

**ಗೋಪಾ:—** ( ಹುಚ್ಚೆದ್ದು ) ಅಯ್ಯೋ ! ಏನು . . ಯಾಕೆಂತೆಂದರೆ. . ನಿನ್ನ ಮುಖ ನೋಡಲಾಗದು (ಹೋಗುವನು).

( ಕೆಲಹೊತ್ತು ನಿಶ್ಶಬ್ದತೆ )

**ರಾಮಣ್ಣ :—** ( ಒಮ್ಮೆಲೆ ಎದ್ದು ದೈನ್ಯದಿಂದ ) ವೆಂಕಾ, ಇದೆಲ್ಲಿಯ ಭ್ರಮೆ ನಿನಗೆ ? ನನ್ನಲ್ಲಿ ವಿಶ್ವಾಸವಿಲ್ಲವೆ ? ನನ್ನ ಮಾತಿನಲ್ಲಿ ವಿಶ್ವಾಸವಿಲ್ಲವೆ?

**ವೆಂಕ:—** ( ತಿರಸ್ಕಾರದಿಂದ ) ಮನುಷ್ಯರ ಮಾತಿನಲ್ಲಿ ವಿಶ್ವಾಸವಿಡುವದಾದರೆ— ಮಹರ್ಷಿಗಳ ಮಾತಿನಲ್ಲಿ ವಿಶ್ವಾಸವಿಟ್ಟವರನ್ನು ಯಾಕೆ ದೂಷಿಸಬೇಕು ?

**ರಾಮಣ್ಣ:—** ( ಅಪಮಾನಿತನಾಗಿ ) ಅಲ್ಲ, ವೆಂಕಾ, ಅವರದು ವಿಶ್ವಾಸವಲ್ಲ, ಡಾಂಭಿಕತನ ; ಅಂತಹ ಹುಚ್ಚು ಮಾತುಗಳನ್ನು ಹೇಳುವವರು ಮಹರ್ಷಿಗಳಲ್ಲ, ಮುದಿಮಂಗಗಳು—

**ವೆಂಕ :—** ( ತಡೆಯದೆ ) ಆದರೆ ತಾವು ಹೇಳಿದ್ದರಲ್ಲಿ ತಮ್ಮದೇ ವಿಶ್ವಾಸವಿಲ್ಲದವರು ಮಂಗತನದ ಮಹರ್ಷಿಗಳಲ್ಲವೆ ? ಆಡಿದಂತೆ ಮಾಡ-

ದವರೂ ಡಾಂಭಿಕರಲ್ಲವೆ? ಬಾಲವಿವಾಹವು ಬಲಾತ್ಕಾರವೆಂದು ಕೂಗಿ, ಮನೆಯೊಳಗಿನ ಅಕ್ಕ-ತಂಗಿಯರನ್ನು ಅಂಗಡಿಯ ಗೊಂಬೆಗಳಂತೆ ಮಾರು-ವಾಗ ಕುಣಿಯುವದು ಡಾಂಭಿಕತನವಲ್ಲವೆ? ಸಾಲೆಯ ಮಕ್ಕಳನ್ನು ದಂಡಿಸುವ ಶಿಕ್ಷಕರನ್ನು ಗೋಳಿಡಿಸಿ, ಆ ಶಿಕ್ಷಕರಿಗಿಂತ ಹೆಚ್ಚಿನ ಪದವಿ-ಯನ್ನು ಪಡೆದೆವೆಂದು ಆ ಮಕ್ಕಳುಗಳ ತಾಯಂದಿರನ್ನು ಬೆಂಕಿಯಲ್ಲಿ ಬೇಯಿಸಿ, ಬಿಸಿಲಿನಲ್ಲಿ ಬೆಂಡುಗೊಳಿಸಿ, ಮಣ್ಣಿನಲ್ಲಿ ಮಲಗಿಸುವದು ಡಾಂಭಿಕತನವಲ್ಲವೆ? (ಕಳಕಳಿಯ ಆವೇಶದಿಂದ) ಕಠೋರವಾದ ಧರ್ಮಕ್ಕೆ ಹೊರಗಾಗಿ, ಕಟುಕನಂತಿದ್ದ ರೂಢಿಗೆ ಹೆದರಿ, ಕ್ರೂರನಾದ ಸಮಾಜಕ್ಕೆ ಹೇಸಿ— ತಾರುಣ್ಯದ ತಪ್ಪು ಸಾಹಸದಿಂದೇ ಆಗಲಿ— ಹಡೆದ ಮಕ್ಕಳನ್ನು ಸಾಯಹೊಡೆಯುವ ಬಾಲವಿಧವೆಯರನ್ನು ಬಯಲಿಗೆಳೆಯುವದು; ಅದೇ ಕಠೋರಧರ್ಮದ ಹರಕೆಯಿಂದ, ಅದೇ ಕಟುಕರೂಢಿಯ ಹೆಸರಿನಿಂದ, ಅದೇ ಕ್ರೂರಸಮಾಜದ ಹೆಮ್ಮೆಯಿಂದ ಸತ್ತ ಮಕ್ಕಳನ್ನು ಹಡೆದು ಸಾಯು-ಲಾದ ಬಾಲಗೃಹಿಣಿಯರನ್ನು ಮನೆಯಲ್ಲಿ ಮುಚ್ಚಿಡುವದು, ಇದು ಡಾಂಭಿಕತನವಲ್ಲವೆ? ಆಡಿದಂತೆ ಮಾಡಿತೋರಿಸಿದ ನಿಮ್ಮ ಯಾವ ಕೆಲಸವನ್ನು ನೋಡಿ—

(ರಾಮಣ್ಣನು ಖೊಳ್ಳನೆ ನಗುವನು. ವೆಂಕಾಚಾರಿಗೆ ಮೊದಲು ಸಿಟ್ಟು ಬಂದರೂ ರಾಮಣ್ಣನ ಮುಖದಲ್ಲಿ ಕಳೆಗಟ್ಟುತ್ತಿರುವ ಭೀಕರ ಶಾಂತತೆಯನ್ನೂ ನಗೆಯಲ್ಲಿ ಮಾತಾಡುತ್ತಿರುವ ಕರ್ಕಶಧ್ವನಿಯನ್ನೂ, ತಡೆದ ಕಣ್ಣೀರಿನಿಂದ ವಿಕಾರವಾಗಿ ಕಾಣಿಸುವ ಕಣ್ಣುಗಳನ್ನೂ ನೋಡಿ ಹೆದರುವನು).

**ರಾಮಣ್ಣ:—** (ಬಂದು ಬೆನ್ನು ಚಪ್ಪರಿಸಿ) ಭಲೆ! ವೆಂಕಾಚಾರೀ, ನಾವೆಲ್ಲ ಬಾಲವಿಧವೆಯರು, ಅಲ್ಲವೆ? ಬಾಲ್ಯದಲ್ಲಿಯೆ ನಮ್ಮ ಸೌಭಾಗ್ಯವಾದ ಸಾಹಸವು ಕಳೆದು ಹೋಗಿಲ್ಲವೆ? ನಾವೆಲ್ಲರೂ ಡಾಂಭಿಕರೆ ಅಲ್ಲವೆ? ನಮ್ಮ ಪೂರ್ವಜರು ವೀರರೆಂದು ಹೇಳುವದು, ಅವರ ಹೇಡಿತನಕ್ಕಾಗಿ ಎಲ್ಲವನ್ನೂ ಕಳೆದುಕೊಂಡು ಈಗ ಗೋಳಿಡುವದು; ಇದು ಡಾಂಭಿಕತನವಲ್ಲವೆ? ನಮ್ಮನ್ನು ಹುಟ್ಟಿಸಿ ಉಣ್ಣಿಸುವವ ದೇವ ಎಂದು ಹೇಳುವದು, ಆ ದೇವ-ನನ್ನೆ ಉಣ್ಣಿಸುವದರಲ್ಲಿ ಸತ್ತುಹೋಗುವದು; ಇದು ಡಾಂಭಿಕತನವಲ್ಲವೆ? ತಾಯಿಯು ದೇವತೆ ಎಂದು ಹೇಳುವದು, ಆ ತಾಯಿಯನ್ನು ರಾಕ್ಷಸನಂತೆ

ಒದೆಯುವ ತಂದೆಯೂ ದೇವತೆ ಎನ್ನುವದು ; ಇದು ಡಾಂಭಿಕತನವಲ್ಲವೆ? ವೆಂಕಾ, ಆಡಿದಂತೆ ಮಾಡುವದಕ್ಕಿಂತ ಮಾಡಿದ್ದನ್ನು ಆಡುವವರೆ ಹೆಚ್ಚಿನವ-ರಲ್ಲವೆ ? ಆಡಿದಂತೆ ಮಾಡುವದು ಹೇಡಿತನ ; ಮಾಡಿದ್ದನ್ನು ಆಡುವದರಲ್ಲಿ ಧೈರ್ಯವಿದೆ.. ವೆಂಕಾ, ನಾನು ಏನು ಮಾಡಿರುವೆನೆಂಬದನ್ನು ಕೇಳಿದೆ-ಯೆಂದರೆ—

**ವೆಂಕ:**— ( ಬೇಜಾರವಾಗಿ) ಇನ್ನೂ ಆ ಭಾಗ್ಯ ದೊರೆತಿಲ್ಲ ನನಗೆ.

**ರಾಮಣ್ಣ:**— ( ಕ್ರೂರ ನಗೆಯಿಂದ) ಎಲ್ಲರಿಗೂ ಆ ಭಾಗ್ಯ ದೊರ-ಕುವದು ಈಹೊತ್ತು ನಾನು ಸಭೆಗೆ ಬಂದರೆ.

**ವೆಂಕ:**— ( ಹಟದಿಂದ ) ನೀವು ಸಭೆಗೆ ಬರುವಂತಲೆ ಇಲ್ಲ.

**ರಾಮಣ್ಣ:**— ( ನಿರ್ಧಾರದಿಂದ ) ಹಾಗಾದರೆ ಸಭೆಯೆ ಇಲ್ಲಿಗೆ ಬರುವದು.

**ವೆಂಕ:**— ( ಕಠೋರಬುದ್ಧಿಯಿಂದ) ಸಭೆಯಲ್ಲಿ ನೀವಿಲ್ಲದಿದ್ದರೆ ಅದು ಸಭೆಯ ಸೌಭಾಗ್ಯ.

**ರಾಮಣ್ಣ:**—( ನಗೆ ಅಡಗುತ್ತ ) ಸಭೆಯ ಮಾತು ನಡೆದಿದೆ, ವಿಧವೆ-ಯರದಲ್ಲ.

**ವೆಂಕ:**— ( ಸೊಕ್ಕಿನಿಂದ ) ಅದನ್ನೆ ಹೇಳಿದೆ. ಸೌಭಾಗ್ಯಕ್ಕೆ ಗಂಡಸು ಬೇಕು— ಆಡಿದಂತೆ ಮಾಡುವ ಗಂಡಸು.

**ರಾಮಣ್ಣ:**—(ಕೋಪಾವೇಶದಿಂದ) ಎಲೊ ! ಆಡಿದಂತೆ ಮಾಡುವವ ಹೇಡಿ, ಹೆಂಗಸು ಎಂದು ಇದೇ ಹೇಳಲಿಲ್ಲವೆ ನಿನಗೆ? ನಮ್ಮ ಸಮಾಜದ ವೈಶಿಷ್ಟ್ಯವೆಂದರೆ— ಹೊಲೆಯರು ಬೇಕೇ ಬೇಕೆಂದು ಹೇಳಿ ಎಲ್ಲರೂ ಹೊಲೆಯರಾಗಿದ್ದಾರೆ. ಅದರಲ್ಲೇನು ಪೌರುಷವಿದೆ ? ಸಂಸಾರಕ್ಕೆ ಹೆಂಗಸು ಬೇಕೇ ಬೇಕೆಂದು ಹೇಳಿ ಗಂಡಸರು ಕೂಡ ಗೃಹಿಣಿಯರಾಗಿ ಗೃಹದಲ್ಲಿಯೆ ಸೇರಿಕೊಂಡಿದ್ದಾರೆ. ಅದರಲ್ಲೇನು ಪೌರುಷ ? ಗುರುಹಿರಿಯರಿಗೆ ಮಣಿ-ಯಲೇ ಬೇಕೆಂದು ಹೇಳಿ ಎಲ್ಲರೂ ಮಣಿಯುವಂತೆ ಟೊಂಕ ಕಟ್ಟಿದ್ದಾರೆ. ಅದರಲ್ಲೇನು ಪೌರುಷ ? ಮಕ್ಕಳಿಂದ ತಮಗೆ ಸ್ವರ್ಗ ಎಂದು ಹೇಳಿ

ಮಕ್ಕಳನ್ನು ಹಡೆಯುವರು. ಅದರಲ್ಲೇನು— ( ಒಮ್ಮೆಲೆ ಶಾಂತನಾಗಿ ತಿರಸ್ಕಾರದಿಂದ ತನ್ನನ್ನು ದಿಟ್ಟಿಸುತ್ತಿರುವ ವೆಂಕಾಚಾರಿಯನ್ನು ನೋಡಿ ) ನಿಜ. ವೆಂಕಾಚಾರೀ, ನೀನು ಹೇಳಿದಂತೆ ನಾನು ಕೇವಲ ಮಾತನಾಡುವೆ.... ಮತ್ತೇನು ಹೇಳಿವೆ ನೀನು ?.. ಹಂ.. ಆಡಿದಂತೆ ಮಾಡುವವ ಗಂಡಸು ಎಂದೆ ಅಲ್ಲವೆ ? ನಿಜ.. ಆಗಲಿ... ಇದುವರೆಗೆ ನಾನು ಏನೇನು ನುಡಿದಿರುವೆ ?

ವೆಂಕ:— ( ಹೊರಡುತ್ತ ) ನಿಮ್ಮ ತಂದೆ ನುಡಿದದ್ದನ್ನೆ.

ರಾಮಣ್ಣ :— ( ಅವನನ್ನು ಬಲವಾಗಿ ತಡೆದು ) ಅಲ್ಲವೆ ಮತ್ತೆ !.. ನನ್ನ ತಂದೆ ಏನೇನು ನುಡಿದಿದ್ದರು ?.. ಹಂ.. ಗತಿ ಇಲ್ಲದವರಿಗೆ, ಯೋಗ್ಯತೆ ಇಲ್ಲದವರಿಗೆ ಮಕ್ಕಳು ಬೇಡ ಎಂದಿದ್ದಿಲ್ಲವೆ ?

ವೆಂಕ:— ( ಬೇಜಾರವಾಗಿ ) ಅದಕ್ಕೇ ನೀವು ಹೆಂಡತಿಯನ್ನು ಬಿಟ್ಟು ಬಿಟ್ಟರಿ ( ಹೊರಡುವನು ).

ರಾಮಣ್ಣ:— ( ಅವನನ್ನು ಗಟ್ಟಿಯಾಗಿ ಹಿಡಿದು ಗದ್ದರಿಸಿ ) ತಡೆ, ವೆಂಕಾ, ನೀನಿನ್ನೂ ಹುಡುಗ.

ವೆಂಕ:— ( ಕೆರಳಿ ) ಇದೂ ನಿಮ್ಮ ತಂದೆಯವರೇ ಹೇಳುವ ಮಾತು.

ರಾಮಣ್ಣ:— ಆದರೆ ಮಕ್ಕಳು ಬೇಡ ಎಂದು ಹೇಳಿ ನನ್ನ ತಂದೆಯವರು ಅದರಂತೆ ನಡೆದಿರುವರೇನು ?.... ನಡೆದಿದ್ದರೆ ಒಳಿತಾಗುತ್ತಿತ್ತು, ಅಲ್ಲವೆ ? ನಾನೇ ಇರುತ್ತಿರಲಿಲ್ಲ.... ಹಿರಿಯರ ಮಾತು ನಡೆಸುವದು ಹುಡುಗರ ಕೆಲಸ ಎಂದು ಅವರೇ ಹೇಳುವದಿಲ್ಲವೆ ?.... ( ಗಾಂಭೀರ್ಯ ತಾಳಿ ) ವೆಂಕಾ, ಇನ್ನು ಕೇಳು. ಯಾವ ಮಾತನ್ನು ನುಡಿದು ನಡೆಸುವ ಧೈರ್ಯವಿದ್ದಿಲ್ಲವೊ ನಮ್ಮ ತಂದೆಗೆ, ಯಾವ ಮಾತನ್ನು **ನುಡಿಯಲು** ಕೂಡ ನಿಮಗೆ ಧೈರ್ಯವಿಲ್ಲವೊ, ಆ ಮಾತನ್ನು ನಾನು ನಡೆಸಿರುವೆ.... ತಿಳಿಯಿತೆ, **ನುಡಿಯದಿದ್ದರೂ ನಡೆಸಿರುವೆ**.. ಗತಿ ಇಲ್ಲದವರ, ಯೋಗ್ಯತೆ ಇಲ್ಲದವರ ಮಕ್ಕಳು ಸಮಾಜಕ್ಕೆ ಬೇಡ ಎಂದು ನನ್ನ ತಂದೆ ನುಡಿಯುವರು ; ಗತಿಗೆಟ್ಟ, ಮತಿಗೆಟ್ಟ ಬಾಲವಿಧವೆಯರ ಮಕ್ಕಳು ಸಮಾಜಕ್ಕೆ ಯಾಕೆ

ಬೇಡ ಎಂದು ನೀನು ನುಡಿಯುವೆ.. ಮತಿ ಇಲ್ಲದ ಬಾಲಗೃಹಿಣಿಯರ ಮಕ್ಕಳು ಯಾರಿಗೆಬೇಕು ಎಂದೂ ನೀನು ನುಡಿಯುವೆ.. ಆದರೆ ನಾನು ನುಡಿಯುವವನಲ್ಲ.. ಮತಿ ಇಲ್ಲದ ಬಾಲಗೃಹಿಣಿಯರ ಮಕ್ಕಳು ಯಾಕೆ ಬೇಕು (ಆವೇಶದಿಂದ) ಎಂದು ಕೇವಲ ಕೂಗುವವನಲ್ಲ ನಾನು; ಅಂತಹ ಮಕ್ಕಳು ಬೇಡ ಎಂದು ತೋರಿಸಲು, ಅಂತಹ ಮಕ್ಕಳನ್ನು ಕೊಂದೊಗೆ-ವುದರಲ್ಲಿ ಪುಣ್ಯವಿದೆ, ಸಮಾಜದ ಕ್ಷೇಮವಿದೆ ಎಂದು ತೋರಿಸಲು, ಆಡಿ-ದಂತೆ ಮಾಡಲು, ಇದೊ— ಈ ನನ್ನ ಕೈಗಳಿಂದ, ಈ ನನ್ನ ಮನೆಯಲ್ಲಿ ನನ್ನ ತಂಗಿಯ ಮಗುವನ್ನು ಕೊಂದಿರುವೆ (ಕೂಗುತ್ತ) ವೆಂಕಾ, ಆ ಮಗು-ವನ್ನು ನಾನೇ ನನ್ನ ಕೈಗಳಿಂದ ಕೊಂದೆ.... ಇನ್ನಾದರೂ ನಿಮ್ಮ ಸಭೆಗೆ ಬರಲೆ? ನನ್ನ ಬಿಡಬೇಡ,! ವೆಂಕಾ, ನನ್ನ ದೂಡಬೇಡ (ಎಂದು ಅವನ ಕೈಗಳನ್ನು ಗಟ್ಟಿಯಾಗಿ ಹಿಡಿಯುವನು)

**ವೆಂಕ:**— (ಕೈ ಕೊಸರಿಕೊಳ್ಳುತ್ತ ಗಾಬರಿಯಿಂದ) ಇದು— (ಅತ್ತಿತ್ತ ನೋಡುತ್ತ) ಸಭೆ.. ಇ..ಲ್ಲ.. ರಾಮಣ್ಣ.. ರಾಯರೆ....

**ರಾಮಣ್ಣ:**— (ಅವನನ್ನು ತಬ್ಬಿ) ! ಇದನ್ನೆ ಸಭೆಯಲ್ಲಿ ಹೇಳುವೆ, ವೆಂಕಾ, ಇದನ್ನೆ ಹೇಳುವೆ. ಸಭೆಗೆ ಹೇಳುವೆ ಸಮಾಜಕ್ಕೆ ಹೇಳುವೆ— ತತ್ತ್ವಕ್ಕಾಗಿ, ಆಡಿದಂತೆ ಮಾಡಿ ತೋರಿಸುವದಕ್ಕಾಗಿ, ನನ್ನ ತಂಗಿಯ ಕೂಸನ್ನು ಕುರದಂತೆ—

**(ಎಂದು ಕ್ರೂರಮುದ್ರೆಯಿಂದ ಕುತ್ತಿಗೆ ಹಿಚುಕುವವರಂತೆ— ಹಿಚುಕಿ ಕೊಲ್ಲುವಂತೆ ನಟಿಸುವನು. ವೆಂಕಾಚಾರಿಯು ಮುಖಮುಚ್ಚಿಕೊಳ್ಳುವನು.)**

(ತೆರೆ)

---

# ಮೂರನೆಯ ಅಂಕ

[ ಅದೇ ದಿವಸದ ಐದು-ಐದುವರೆ ಗಂಟೆಯ ಸಮಯ. ಮನೆಯ ಮುಂದಿನ ಅಂಗಣದಲ್ಲಿ. ಬಲಕ್ಕೆ ಕಾಣಿಸುವದು ಮನೆಯ ಬಾಗಿಲು, ಅದಕ್ಕೆ ಎದುರಾಗಿ ಎಡಬದಿಗೆ ಮನೆಯ ಹಲಬಾಗಿಲು. ಈ ಬಾಗಿಲುಗಳ ನಡುವೆ ಅಂಗಣಕ್ಕೆ ಮಾಳಿಗೆಯಿಲ್ಲ. ಬಲಬದಿಯ ಬಾಗಿಲಿನ ಎರಡೂ ಕಡೆಗೆ ಎರಡು ಕಟ್ಟೆಗಳು. ಬಾಗಿಲಿನಿಂದ ಹೊರಬೀಳುವಾಗಿನ ಬಲಬದಿಯ ಕಟ್ಟೆಯ ಕೆಲವು ಭಾಗ ಮಾತ್ರ ಕಾಣಿಸುವದು. ಆ ಕಟ್ಟೆಯ ಕೆಳಗೆ ಕೊಂಚ ದೂರದಲ್ಲಿ ಒಂದು ಕಲ್ಲುಹಾಸಿಗೆ. ತೆರೆಯು ಮೇಲಕ್ಕೇಳುವಾಗ ಬಾಗಿಲಿನ ಎಡಬದಿಯ ಕಟ್ಟೆಯ ಕಂಬಕ್ಕೆ, ಬಾಗಿಲಿಗೆ ಎದುರಾಗುವಂತೆ, ಮುಂದೆ ತಾಟವನ್ನು ಇಟ್ಟುಕೊಂಡು— ಅದಕ್ಕೆ "ಗಂಗಾಳ''ವೆಂದು ಅವನ ಹೆಸರು— ಗುರುಸಿದ್ಧನು ಅದೇ ಊಟವನ್ನು ಮುಗಿಸಿಕೊಳ್ಳುತ್ತಿರುವನು. ಅವನಿಗೆ ಎದುರಾಗಿ, ಒಂದ ಬಾಗಿಲಂ ತೆಗೆದಿಟ್ಟು, ಹೊಸ್ತಿಲದ ಮೇಲೆ ಎಡಗಾಲು, ಎಡದ ಮೊಣಕಾಲಿಗೆ ಎಡದ ಮೊಣಕ್ಕೈ, ಎಡದ ಮೊಳಕೈಯಲ್ಲಿ ಎಡದ ಕೆನ್ನೆ, ಬಲಗಾಲು ಹೊರಗೆ ಹೀಗೆ ಸುಂದರವ್ವನು ಕುಳಿತಿದ್ದಾಳೆ. ಗುರುಸಿದ್ಧನು ಕಡೆಯ ತುತ್ತನ್ನು ತಿನ್ನುತ್ತ ತನ್ನ ಎಡಕ್ಕಿದ್ದ ತಂಬಿಗೆಯನ್ನು ಮಾತನಾಡದೆ ಮುಂದೆ ಸರಿಯುವನು. ಸುಂದರವ್ವನು ಎಚ್ಚತ್ತವಳಂತೆ ತನ್ನ ಮುಂದಿದ್ದ ನೀರಿನ ಪಾತ್ರೆಯಿಂದ ತಂಬಿಗೆಯಲ್ಲಿ ನೀರು ತುಂಬುವಳು. ಗುರುಸಿದ್ಧನು ಕುಡಿಯುವಾಗ, ಸುಂದರವ್ವನು ಅವನ ತಾಟದ ಕಡೆಗೆ ನೋಡುತ್ತ, ತಾಯ್ತನದ ತಿಳಿದನಿಯಲ್ಲಿ— ]

**ಸುಂದರವ್ವ** :— ಅಯ್ಯ! ಇದೇನೊ, ಗುರುಸಿದ್ಧ? ನೀರನೆ ಕುಡಿಯುವೆಯಲ್ಲ! ಊಟ ಮಾಡಲೆ ಇಲ್ಲ— ಯಾವಾಗ ಮುಂಜಾನೆ ತಿಂದು ಹೋಗಿರುವೆ!

**ಗುರುಸಿದ್ಧ**:— ( ತಂಬಿಗೆಯನ್ನು ಕೆಳಗಿಟ್ಟು, ಗಂಟಲಿನಲ್ಲಿಯ ನೀರನ್ನು ಪೂರ್ತಿಯಾಗಿ ಗುಟಕರಿಸಿ, ಉಸಿರೆಳೆದು ) ಯಾತರ ಊಟ, ಅವ್ವ! ಕೆಳಗ ನೋಡಿದಾಗೊಮ್ಮೆ ಅದೇ ನೆನಪ ಆಗತದ ನನಗ.... ಪಾಪ! ಎಷ್ಟು ನೀರು ಕುಡಿದಿದ್ದಳೊ ಹೆಣ್ಣುಮಗಳು!

**ಸುಂದರವ್ವ** :— ಹುಶ್ ದೇವರೆ! ಏನ ಬಂದರ ಮ್ಯಾಲೊಂದು

ಆಪತ್ತು !.... ಜೀವ, ಜೀವ ಅಂತ ಬಡೆದುಕೊಳ್ಳೋದಷ್ಟೆ ! ಮನುಷ್ಯನ ಜೀವ ಅಂದರ ಎಷ್ಟರದು? ಹೀಂಗ ಅನ್ನೋದರೊಳಗ ಹೀಂಗ ಇರೋದಿಲ್ಲ..

**ಗುರುಸಿದ್ಧ:—** ಮತ್ತೆಲ್ಲಿಯು ಜೀಂವಾ! ಹಕ್ಕಿ ತನ್ನ ಪಕ್ಕ ಬಡೆ-ದ್ಹಾಂಗ ಎದೆ ಹಾರೋತನಕ ಜೀಂವಾ ! ಹಕ್ಕಿ ಬೇಕು, ಮನಸ್ಯಾ ಬ್ಯಾಡ.... ತನ್ನ ಪಕ್ಕ ಎಲ್ಲಿ ಐತಿ ಗೊತ್ತಿರತದ ಹಕ್ಕಿಗೆ.... ಈ ಹಾರೋ ಎದೆ ಎಲ್ಲಿ ಐತಿಯೊ !

**ಸುಂದರಮ್ಮ :—** ( ಕನಿಕರದಿಂದ ) ಪಾಪ!.. ಸತ್ತಳು ಅಂದರ ವಿಶ್ವಾಸ ಕೂಡಲಿಕ್ಕಿಲ್ಲ.... ಮಧ್ಯಾಹ್ನದ ಊಟ ಆದ ಮ್ಯಾಲ ಇಲ್ಲಿ ಬಂದಳು.... ನಾನು ಹಿತ್ತಲದೊಳಗ ಇದ್ದೆ.. ಅಲ್ಲೇ ರಿಂದಾವನ ( ವೃಂದಾವನ ) ದ ಕಟ್ಟೆಗೆ ಕೂತು ಹರಟಿ ಹೊಡೆದಳು, ನಕ್ಕಳು, ಹೋಗ-ತೀನಿ ಇನ್ನ ಅಂತ ಹೊರಟಳು— ಹೋಗಿ ಭಾವೀ ಬೀಳ್ತಾಳ ಅಂತ ಯಾರ ಕನಸ-ಮನಸಿನಾಗ ಬಂದಿರಲಿಕ್ಕಿಲ್ಲ.. ಪಾಪ ! ಗೋಪಾಲಾಚಾರ್ರ ಹಣೆ-ಯೊಳಗೇ ಬರೆದಿಲ್ಲ ಹೆಂಡತಿಯ ಸುಖಾ !..

**ಗುರುಸಿದ್ಧ:—** ( ಎಲ್ಲವನ್ನೂ ಅರಿತ ಗಂಡಸಿನಂತೆ ) ಭಾಂವೀ ಬಿದ್ದದ್ದು ನನಗ ಸೋಜಿಗ ಅಲ್ಲ, ಅಮ್ಮಾ.. ಆ ಪಿಡಗಿನಾಗ ಸಾಯೋಮುಂಚೆ ನಮ್ಮಾಕೇನೂ ಭಾಂವೀ ಬಿದ್ದಿದ್ದಳು.... ಆದರ— —ಈ ಹೆಣ್ಣುಮಗಳಷ್ಟು ತಯಾರಿ ಇರಲಿಲ್ಲ ಬಿಡಿರಿ ಆಕೇದು.. ಮೊದಲನೆಯ ಏಟಿಗೆ ಒದರಿದಳು, ಎರಡನೆಯ ಏಟಿಗೆ ತಗದೇ ಬಿಟ್ಟಿದ್ದಿವಿ ಹೊರಗ! ಲಬ್ಬರ ಚಂಡು ಪುಟಿ-ದ್ಹಾಂಗ.. ಆದರ ಈ ಹೆಣ್ಣುಮಗಳು— ಸದ್ದಿಲ್ಲ, ಸುಂಯಿಲ್ಲ, ಸಪ್ಪಳಿಲ್ಲ—

**ಸುಂದರಮ್ಮ:—** ( ನಡುವೆಯೆ ) ಪಾಪ! ಸಣ್ಣ ಹುಡುಗೆ.. ಗಾಬರಿ ಆಗಿಬಿಟ್ಟಳೇನೊ !

**ಗುರುಸಿದ್ಧ:—** ( ಮೊದಲಿನಂತೆ, ಆದರೆ ಅದಕ್ಕೂ ಹೆಚ್ಚಿನ ಗಾಂಭೀರ್ಯ-ದಿಂದ ) ಗಾಬರಿ ಅಲ್ಲ ಬಿಡರೆಮ್ಮಾ ಅದು, ಸಾಯಬೇಕೂಂತ ಅಷ್ಟ ಹಟ ಇದ್ದಿರಬೇಕು.... ಧೈರಿಯಾ ಹೆಣ್ಣಮಗಳದು !

**ಸುಂದರಮ್ಮ :—** ( ಮಾತು ಮುಗಿಸುವ ಹಂಚಿಕೆಯಿಂದ ) ಸಂಸಾರಾ

ಅಂದರ ಹೆಂಗಸರಿಗೆ ಛಾವೀ ಬಿದ್ದಹಾಂಗೇ.... ಉಶ್... ಇನ್ನೊಂದಿಷ್ಟು ನೀರು ಬೇಕೇನು?

**ಗುರುಸಿದ್ಧ:**— ( ತೇಗುತ್ತ ತಲೆ ಅಲ್ಲಾಡಿಸುವನು ).

**ಸುಂದರವ್ವ:**— ಗೋಪಾಲಾಚಾರ್‍ರಿಗೆ ಕೈಜೋಡಿಸಿ ಹೇಳಿದರು ಎಲ್ಲಾರೂ— ಬ್ಯಾಡ, ಬ್ಯಾಡ, ಮದಿವೆ ಬ್ಯಾಡಾಂತ! ಆ ಹುಡುಗೇ ಹಣೆಯೊಳಗೇ ಬರೆದಿತ್ತಲ್ಲ!.... ನಮ್ಮ ರಾಮೂ ಅಂತೂ ಆಹೊತ್ತು ಎಷ್ಟು ಒದರಾಡಿದ, ಅತ್ತ, ಕರೆದ—

**ಗುರುಸಿದ್ಧ:**—(ಒಮ್ಮೆಲೆ)ರಾಮಣ್ಣಾ ಅವರಿಗೆ ನಿದ್ದೆ ಹತ್ತೇತೇನರಿ?

**ಸುಂದರವ್ವ:**— ಎಲ್ಲಿಯ ನಿದ್ದೆ ?.... ಎಲ್ಲ ಮುಗಿಸಿ ಈಗ ಬಂದು ಅಳತಾ ಕೂತಾನ ಬ್ರಾಹ್ಮಣ ಶೀನಣ್ಣನ ಮುಂದೆ!

**ಗುರುಸಿದ್ಧ:**— (ಆಶ್ಚರ್ಯ ತೋರಿಸಿ) ಯಾರು ? ಗೋಪಾಲಾಚಾರ್‍ರು ಅಳತಾರ? ( ಸುಂದರವ್ವನು ತಲೆತೂಗುವಳು ) ಹು.... ಹೆಂಡಿರು ಸತ್ತು ರೂಢಿ ಆಗಿರಬೇಕು ಅವರಿಗೇಂತ—

**ಸುಂದರವ್ವ:**— ( ಮುಖದಲ್ಲಿ ನಗೆ, ದನಿಯಲ್ಲಿ ಸಿಟ್ಟು ಹೀಗೆ ) ಸಾಕೋ!.. ನಿನಗಂತೂ ಮುದುಕ ಆದರೂ ಬುದ್ಧಿ ಬರೋದಿಲ್ಲ.... ಸುಮ್ಮಸುಮ್ಮನೆ ಆ ಬ್ರಾಹ್ಮಣನ್ನ ಕಂಡಲ್ಲಿ ಕೆಣಕುವೆ.

**ಗುರುಸಿದ್ಧ:**— ಹಾಗಲ್ಲವ್ವಾ; ಮನಸ್ಯಾನ ನಡತೆ ಹೇಳತದ ಮನಸ್ಯಾನ ಕಿಮ್ಮತ್ತು! ದೊಡ್ಡವರು, ಎಲ್ಲಾ ಓದಿಬರೆದವರು ಅಂತ ನೀವು ಅವರನ್ನ ಕರೆದು ಮ್ಯಾಲ ಕೂಡಿಸತೀರಿ—

**ಸುಂದರವ್ವ:**— ಅವರು ಏನು ಮಾಡ್ತಾರ ಅದನ್ನ ಕಟ್ಟಿಕೊಂಡು ನಮಗೇನು? ನಮ್ಮಷ್ಟಕ್ಕ ಅವರೊಂದು ಬ್ರಾಹ್ಮಣಾ ಅಂತ ಕರೀತೀವಿ—

**ಗುರುಸಿದ್ಧ:**— ( ತನ್ನ ಮಾತನ್ನೆ ನಡೆಸುತ್ತ ) ಶಾಸ್ತ್ರ ಹೇಳ್ತಾರ, ಸಮ್ಮಂದ ಹೇಳ್ತಾರ, ಮಂತರ ಹೇಳ್ತಾರ, ಮಾತ ಹೇಳ್ತಾರ— ಆದರ ನಾಕ ಮಂದಿಯೊಳಗ ಸಾಗಿಸ್ಕೊಂಡು ಇರೋದಾಗೋದಿಲ್ಲಲ್ಲ ಅವರೀಗ!.. ಏನ ಸೋಜಿಗ ಅಂತೀನಿ!.. ಕಣ್ಣಮುಂದ ದೊಡ್ಡರಾಯರು ಇದ್ದಾರ—

ಮದಿವೀನೇ ಮಾಡಿಕೊಳ್ಳಲಿಲ್ಲ ಒಮ್ಮೆ ಹೆಂಡತಿಯನ್ನ ಕಳೆದ್ಕೊಂಡ ಮ್ಯಾಲ!.. ಹಂ.. ನನ್ನಂಥವ, ನಾ ಮಾಡಿಕೋಳಿಲ್ಲ— ದುಡಿದು ಹೊಟ್ಟೆತುಂಬಿಕೊಳ್ಳುವವ !.... ಒಲೆ ಹೊತ್ತಿಸದೆ ಊಟ ಸಿಗತದ ತಮಗ— ಯಾರು ಹೇಳಿದರೊ ಮದಿವೆ ಮ್ಯಾಲ ಮದಿವೆ, ಮದಿವೆ ಮ್ಯಾಲೆ ಮದಿವೆ— ಚಟ ಬಿದ್ದವರ್ಹಾಂಗ—

**ಸುಂದರಮ್ಮ:**— — ನಮಗೇನು ಮಾಡೋದು—

**ಗುರುಸಿದ್ಧ:**—(ಸಿಟ್ಟಿನಿಂದ)ಅಲ್ಲ, ಅಮ್ಮಾ, ಈ ಹೊತ್ತು–ಪಾಪ!.. ಎಳೀ ಕೂಸು!.. ಆಕೇನ್ನ ಅಲ್ಲಿ ಹೊಲಗೇರಿಯೊಳಗಿನ ದನದ್ಹಾಂಗ ನೋಡಲಾಸಲ್ಲ ಹಾಂಗ ವ್ಯೆಕ್ಟೆ ಆಗಿ ಬಿದ್ದದ್ದು ನೋಡಿ—

**ಸುಂದರಮ್ಮ:**— (ಉಪಾಯಾಂತರವಾಗಿ) ಅವರವರ ಕರ್ಮ ಅವರಿಗೆ, ಗುರುಸಿದ್ಧಾ.. ತೇಜಸ್ವಿ ಬ್ರಾಹ್ಮಣಾ ಅಂತ ಏನು ಮಾಡಿದರೂ ದಕ್ಕಿಸಿ-ಕೊಂಡು ಹೋಗುವರು.

**ಗುರುಸಿದ್ಧ:**— ( ತ್ವೇಷದಿಂದ ) ಯಾರು ದಕ್ಕಿಸಿಕೊಳ್ಳುವರು? ಈ ಹೊತ್ತು ರಾಯರು ಅಲ್ಲಿ ಇದ್ದಿದ್ದಿಲ್ಲಾ ಅಂದರೆ ಆ ಬ್ರಾಹ್ಮಣನ ಜನಿವಾರ ಉರುಲು ಹಾಕ್ಕೊಳ್ಳಲಿಕ್ಕೇ ಸಾಲತಿದ್ದಿಲ್ಲ.. ಕಯ್ಯೊಳಗಿನ ತಂಬಿಗೆ, ಥಾಲಿ, ಉಂಗುರ— ಎಲ್ಲಾ ಮಾರಿಕೊಂಡರೂ ದಕ್ಕತಿದ್ದಿಲ್ಲ.... ಹುಂ.... ಬಿಟ್ಟಾರ ಜನ? "ಮುದುಕಗ ಬ್ಯಾಸತ್ತು ಭಾಂವೀ ಬಿದ್ದಳೂಂ"ತ ಎಬ್ಬಿಸಿ ಬಿಟ್ಟಾರ ಬ್ಯಾಟ ಇಷ್ಟರಾಗ!.... ( ಒಮ್ಮೆಲೆ ಅಣಕಿನಿಂದ ತಲೆತೂಗಿ) ಛೆ! ಈ ಊರ ಮಂದೀನೂ ಹೆಚ್ಚಿನದು ಬಿಡಪ್ಪಾ!

**ಸುಂದರಮ್ಮ:**— ( ಎದ್ದು ) ಯಾರ ಮಾತು ನಮಗೇನು ಮಾಡೋದು ?

**ಗುರುಸಿದ್ಧ:**— ( ತಾಟು ಕಯ್ಯಾಗ್ಲಿ ಎತ್ತಿ ) ಅದೇ ನನಗೂ ಸೋಜಿಗ! ಯಾರ ಮಾತು ನಮಗೇನೂಂತ ನಾವು ಸುಮ್ಮ ಕೂತರ— ಈ ಮಂದಿ ನಮ್ಮದೇ ಮಾತು ಆಡತಿರತದಲ್ಲ!.... ಮಟಮಟ ಮದ್ದಿಣ ( ಮಧ್ಯಾಹ್ನ) ಎಲ್ಲ ತಿಕ್ಕಾಡಿ — ಮ್ಯಾಲ ಬಿಸಿಲುರಿ, ಕೆಳಗ ಝಳ— ಕಣ್ಣುಮುಂದ

ಮೈ ಕೈ ರಕ್ತ ರಂಬಾಡಾಗಿ, ಮುಖ ಒಡೆದು ಕಣ್ಣು ಉಬ್ಬಿ ಹುಡುಗೆ ಬಿದ್ದಾಳ ಜೀಂವಾ ಹೋಗಿ— ಜೀಂವದಾಗ ಜಿಂವಾ ಇಲ್ಲದ ನೋಡಿಕೋತ ನಿಂತೀನಿ ನಾನು— ಅಷ್ಟರಾಗ ಬಂದನಪಾ ಮಂಗ್ಯಾನ ಹಾಂಗ ಹಲ್ಲು ಕಿರಿದು "ನಿಮ್ಮ ರಾಮಣ್ಣಗ ಹುಚ್ಚ ಹಿಡಿದದೆ ಅಂತ, ಹೌದೇನೂಂ" ತಾನಲ್ಲ! ಕಯ್ಯಾಗಿನ ಹಗ್ಗ ಅವನ ಕುತ್ತಿಗ್ಗೆ ಬಿಗಿದು, ಕಡೆತನಕ ಹಲ್ಲು ಕಿರಿಯೋಹಾಗ ಮಾಡುವಷ್ಟು ಸಿಟ್ಟು ಬಂದಿತ್ತು.... ಮತ್ತ ನನಗೂ ಹುಚ್ಚ ಹಿಡಿದದೆ ಅಂತ ಕಲ್ಲು ಒಗೆಯೋ ಜನ ಇದು !.... "ಹುಚ್ಚ ಹಿಡಿದದ್ದು ಸುಳ್ಳಲ್ಲ, ಯಾರಿಗೆ ಅನ್ನೋದು ಗೊತ್ತಾಗಿಲ್ಲ ಇನ್ನು" ಅಂದೆ! ಆ ಮಡ್ಡ— ತಲೀಗೆ ಮಾತಿನ ಮರಮ ಆದರೂ ತಿಳೀತೋ ಇಲ್ಲೊ !.... ತನಗ ಯಾಕಬೇಕು....? ಒಮ್ಮೆಲೆ ಮೆಲುದನಿಯಲ್ಲಿ) ಅದಕ್ಕ ಕೇಳಿದೆ ರಾಮಣ್ಣರಾಯರಿಗೆ ನಿದ್ದೆ ಹತ್ತೀತೇನೂಂತ.

ಸುಂದರಮ್ಮ:— (ವಿಷಾದದಿಂದ) ಏನ ಆಗಿದೆಯೊ ಏನೊ! .... ಹಾಂಗ ನೋಡಿದರ ಏನೂ ಆಗಿಲ್ಲ .. "ನಾ ಹಾಂಗ ಮಾಡಿದ್ದರ ಹೀಂಗೆಲ್ಲಿ ಆಗತಿತ್ತು? ನಾ ಏನೂ ಮಾಡಲಿಲ್ಲ– ಅದಕ್ಕ ಎಲ್ಲಾ ತಪ್ಪು ನಮ್ಮದೂಂ"ತ ಏನೇನೊ ಮತ್ಮತ್ತ ಹೇಳ್ತಾನ ಹೋದವ-ಬಂದವರಿಗೆಲ್ಲ. . ಯಾರ ಇದ್ದಿದ್ದಿಲ್ಲ ಅಂದರೂ ತನ್ನಷ್ಟಕ್ಕ ತಾನೇ ಹೇಳಿಕೋತಾನ (ಉಸುರ್ಗರೆಯುವಳು).

ಗುರುಸಿದ್ದ:— (ಬಲ್ಲವನಂತೆ) ಹಾಂಗಾದರ ಹುಚ್ಚ ಅಲ್ಲ ಅದು, ಅವ್ವಾ; ರ್ದುದಯಾ (ಹೃದಯ)ದ ಕಳಕಳಿ.

ಸುಂದರಮ್ಮ:— (ಏನನ್ನೊ ಧ್ಯಾನಿಸುತ್ತ) ಏನೊ!.... ನನಗಂತೂ ಇವೆರಡೂ ಅಲ್ಲೀ ಆದದ್ದು ನೋಡಿ ಅದೇ ನಿಜ ಏನೊ ಅಂತ ಅನಿಸತದ.

ಗುರುಸಿದ್ಧ:— (ತಿಳಿಯದೆ) ಎರಡು ಯಾವು, ಅವ್ವಾ?

ಸುಂದರಮ್ಮ:— (ಒಮ್ಮೆಲೆ ಸಮಾಧಾನದಿಂದ) ಗುರುಸಿದ್ಧಾ, ನಿನಗ ದೆವ್ವಿನೊಳಗ ವಿಶ್ವಾಸ ಅದ ಏನೊ?

ಗುರುಸಿದ್ಧ:— (ನಕ್ಕು) ಅಂಥಾ ಮಾತಿನಾಗ ಯಿಸ್ವಾಸ ಇಟ್ಟರ

ಬಾಳೋದು ಹ್ಯಾಂಗವ್ವಾ? ಸತ್ತವರು ಹಾಂಗ ತಿರುಗಿ ಬರಬೇಕಾದರೆ ನನ್ನ ಮುದುಕ ಇಷ್ಟೊತ್ತಿಗ—

**ಸುಂದರಮ್ಮ:—** ( ನಡುವೆಯೆ ) ಯಾಕೊ— ನನಗೂ ಒಮ್ಮೊಮ್ಮೆ ಕಾಗೆ ಕೂಡೋದಕೆ ಟೊಂಗೆ ಮುರಿಯೋದಕೆ ಅಂಬೋ ನ್ಯಾಯ ಇದ್ದಿರ-ಬೇಕೂಂತ ಅನಿಸತದ.... ಆದರೂ ( ರಹಸ್ಯವಾಗಿ ) ರಾಮಣ್ಣನೂ ತುಳಸೀ ಕಟ್ಟೆಯ ಮ್ಯಾಲೆ ಕೂತಿದ್ದ, ಗೋಪಾಲಾಚಾರ್ರ ಹೆಂಡತೀನೂ ತುಳಸೀ ಕಟ್ಟೆಯ ಮ್ಯಾಲೇ ಕೂತಿದ್ದಳು—

**ಗುರುಸಿದ್ಧ:—** ( ಒಮ್ಮೆಲೆ ) ಅಲ್ಲಿ ದೆವ್ವ ಐತಿ ಅಂತ ನಿಮ್ಮ ಸಂಶ್ಯೋ ಏನು ?

**ಸುಂದರಮ್ಮ:—** ( ಸಿಟ್ಟಿನಿಂದ ) ನನ್ನ ಸಂಶಯ ಅಲ್ಲೊ !.. ರಾತ್ರಿ ತಿರುಗಾಡೋದು ನೋಡಿದವರೇ ಹೇಳ್ತಾರ.

**ಗುರುಸಿದ್ಧ:—**(ವಿಶ್ವಾಸವಿಲ್ಲದೆ) ನಸಕಿನಾಗ ನಿದ್ದೆಗಣ್ಣೇಲಿ ನೋಡಿರ-ಬೇಕು.. ತಪ್ಪದೆ ನಸಕಿನಾಗ ಹುವ್ವ, ತುಳಸಿ ಒಯ್ಯಲಿಕ್ಕೆ ಬರತಾನ ಆ ಪದ್ಮನಾಭಾಚಾರಿ—

**ಸುಂದರಮ್ಮ:—** ( ಸಿಟ್ಟಿನಿಂದ ) ಅವರು ಅಲ್ಲೊ—

**ಗುರುಸಿದ್ಧ:—** ( ಅಡ್ಡ ಮಾತಾಡಿ ) —ನೋಡಿದವರು ಅವರು ಅಲ್ಲ.. ದೆವ್ವ ಅವರೂಂತ—

**ಸುಂದರಮ್ಮ:—**(ಒಳಗೆ ನೋಡಿ) ಬಂದೆ.. ಬಂದೆ. (ಗುರುಸಿದ್ಧನಿಗೆ) ನನಗಂತೂ ಒಂದೂ ತಿಳಿಯದು.... ( ಮತ್ತೆ ಒಳಗೆ ನೋಡಿ ) ಇಲ್ಲೇ ಗುರುಸಿದ್ಧಗೆ ಊಟ ಹಾಕ್ತೀನಿ.

**ಗುರುಸಿದ್ಧ:—** ( ಲಗಬಗೆಯಿಂದ ಎದ್ದು ) ಎಲೆಲೆ ! ( ಅಧೈರ್ಯದ ಮೆಲುದನಿಯಲ್ಲಿ ) ಊಟ ಮುಗೀತೂಂತ ಹೇಳವ್ವಾ ! (ಎಂದು ತಲೆಬಾಗಿಲಿಗೆ **ಓಡಿ, ಅದನ್ನು ತೆಗೆದು, ತಿರುಗಿ ಒಮ್ಮೆಲೆ ಅದನ್ನು ಬಲವಾಗಿ ನೂಕಿ " ಎಲ ! " ಎಂದು ಏನೂ ತಿಳಿಯದೆ ದೂರ ಸರಿದು ನಿಲ್ಲುವನು. ಒಳಗೆ ಹೊರಟ ಸುಂದರಮ್ಮನು ಬಾಗಿಲ–ಸಪ್ಪಳಕ್ಕೆ ತಿರುಗಿ ನಿಲ್ಲುವಳು**).

**ಗುರುಸಿದ್ಧ:**— ( ಗಾಬರಿಯ ಒಳ-ಉಸಿರಿನಲ್ಲಿ ) ಇಷ್ಟ್ಯಾಕ ನೆರೆದೇತಿ ಮತ್ತ ಹೊರಗ ಜನ !

**ಸುಂದರವ್ವ:**— ( ಸಂಶಯದಿಂದ ) ದನ ?

**ಗುರುಸಿದ್ಧ:**— ( ಧೈರ್ಯತಂದುಕೊಂಡು ಮುಂದೆ ಬಂದು ) ಅಲ್ಲ, ಅವ್ವಾ, ಮಂದೀ ಹೀಂಗ ಘನ ಮುಕರಿ ಬಿಟ್ಟಾರ.

**ಸುಂದರವ್ವ:**— ( ಬೇಜಾರವಾಗಿ ) ಬಾಗಿಲ ಹಾಕಿ ಬಿಡಪ್ಪಾ! ಮತ್ತೆ ಏನಾಗೇದೊ ಏನೊ ? ..ಹಿಂಗೇ ನಡುಮನೆಯೊಳಗಿಂದ ಹಾಯ್ದು ಹಿತ್ತಲಕ್ಕೆ ಹೋಗಿಬಿಡು.... ( ಗುರುಸಿದ್ಧನು ಮುಂದೆ ಬರುವನು ) ನಿಲ್ಲೊ.. ಮೊದಲು ನಾ ಹೋಗುವೆ.. ಮತ್ತ ಹಾದಿಯೊಳಗ ಅಗಳ-ಗಿಗಳ ಚಲ್ಲುವವ ನೀ.. ನೋಡಿಕೊಂಡು ಹೋಗು, ಅರಿವೆ-ಅಂಚಡಿ ಅಲ್ಲಲ್ಲೇ ಬಿದ್ದಾವ.. ( ಒಳಗೆ ನೋಡಿ ) ಬಂದೆ.. ಬನ್—

(**ಹೋಗುವಳು.** ಗುರುಸಿದ್ಧನು ತಲೆಬಾಗಿಲಿಗೆ ಕಿವಿಗೊಟ್ಟು ಕೇಳಿದಂತೆ ಮಾಡಿ, ಬೆಪ್ಪಾಗಿ. ಉದಾಸೀನನಾಗಿ ಒಳಕ್ಕೆ ಹೊರಡುವನು. ಮನೆಯ ಬಾಗಿಲಿಗೆ ಬರುವಷ್ಟರಲ್ಲಿ ಒಳಗಿನಿಂದ ಯಾರೋ ಬರುವದನ್ನು ನೋಡಿ ಬದಿಗೆ ನಿಲ್ಲುವನು.. ಶೀನಣ್ಣನು ಬರುವನು ಹೊರಗೆ ಹೋಗುವ ವೇಷದಲ್ಲಿ. )

**ಶೀನಣ್ಣ:**— ( ಅವನನ್ನು ನೋಡದೆ ) ಇನ್ನೂ ಊಟ.. ( ನೋಡಿ ) ಹುಂ.. ನಾನು ಹೊರಗೆ ಹೋಗಿ ಬರುವೆ.

**ಗುರುಸಿದ್ಧ:**— ( ಹೆದರಿಕೆಯಿಂದ ) ಬಾಕಿಲ.. (ಎಂದು ತಲೆಬಾಗಿಲಿಗೆ ಹೊರಡುವಷ್ಟರಲ್ಲಿ )

**ಶೀನಣ್ಣ:**—( ಗದ್ದರಿಸಿ ) ಆ ಬಾಗಿಲು ತೆರೆಯಬೇಡೋ ಹುಚ್ಚನಂತೆ.. ಅಲ್ಲಿ ಜನರ ಗಲಾಟೆ ನೆರೆದಿದೆ. ( ಗುರುಸಿದ್ಧನು ಒಳಕ್ಕೆ ಹೋಗಲು ತಲೆಬಾಗಿಲಿಗೆ ಬಂದು ಸರಿಇದೆ ಎಂದು ತಾನೂ ಒಳಕ್ಕೆ ಹೊರಡುತ್ತ ) ಮನೆಯಲ್ಲಿ ಯಾರಾದರೂ ಸತ್ತರೆ, ಕೆಟ್ಟರೆ ನೆರೆಯುವರಿಗೆ ಸಂತೋಷ.. ಮನೆ ಆಗಲಿ, ಮನುಷ್ಯ ಆಗಲಿ- ಸುಡುವಾಗ ಯಾರೂ ಬರುವದಿಲ್ಲ, ಸುಟ್ಟ ಮೇಲೆ— ( ಮುಂದೆ ನೋಡಿ ) ಛೆ, ಇದೊಂದು ಹೊಸ ಪೀಡೆ !

( ಗೋಪಾಲಾಚಾರ್ಯನು ಕಣ್ಣೀರು ಒರೆಸಿಕೊಳ್ಳುತ್ತ ಇದುವರೆಗೆ ಅತ್ತು ಕೆಂಪೇರಿದ ಮುಖದಿಂದ ಬಂದು, ಶೀನಣ್ಣನನ್ನು ನೋಡಿ )

**ಗೋಪಾ:**— ( ಬಿಕ್ಕುತ್ತ ) ರಾಯರೆ, ನನ್ನ ಗತಿ ಏನು ಇನ್ನು? ಯಾಕೆಂತೆಂದರೆ— ಮುಪ್ಪಿನಲ್ಲಿ ನನಗೆ— ಅಯ್ಯೊ—

**ಶೀನಣ್ಣ:**—(ಬೇಜಾರದಿಂದ)ಅಲ್ಲ, ಆಚಾರ್ಯರೆ,ಆಗಿಹೋದದ್ದಕ್ಕೆ— ( ಅವನು ಹೆಚ್ಚಾಗಿ ಬಿಕ್ಕುವದನ್ನು ನೋಡಿ ) ಛೆ! ಇದೇನು ಹುಡುಗ ಬುದ್ಧಿ ನಿಮ್ಮದು!

**ಗೋಪಾ:**— ( ಮುಖ ಮುಚ್ಚಿಕೊಂಡು ) ಅಲ್ಲ.. ಅಂ.. ಯಾಕೆಂ-ತೆಂದರೆ— ಇದು ನನ್ನ ನಾಲ್ಕನೆಯ ಹೆಂಡತಿ—

**ಶೀನಣ್ಣ:**— ( ನಡುವೆಯೆ ) ಎಷ್ಟನೆಯದಾದರೇನು? ಉಳಿಸಲಿಕ್ಕೆ ಬಂದೀತೆ? ತಪ್ಪಿಸಲಿಕ್ಕೆ ಬರುತ್ತಿತ್ತೆ?

**ಗೋಪಾ:**— (ಕಣ್ಣು ಒರೆಸಿ, ಮೇಲೆ ನೋಡಿ, ಮೂಗು ಏರಿಸುತ್ತ) ಅಲ್ಲ.. ನೀವು ಬೇಡಾಂತ ಹೇಳಿದಾಗ.... ಕೇಳಿದ್ದರೆ.. ಯಾಕೆಂತೆಂದರೆ— ( ಕಂಠ ತುಂಬಿ ) ತಪ್ಪಿಸಲಿಕ್ಕೆ ಬರುತ್ತಿತ್ತು, ರಾಯರೆ? ( ಅಳುತ್ತ ) ಮದಿವೆ ಮಾಡಿಕೊಂಡದ್ದು— ಯಾಕೆಂತೆಂದರೆ— ತಪ್ಪು ಮಾಡಿದೆ, ಅಯ್ಯೊ! ರಾಯರೆ, ಯಾಕೆಂತೆಂದರೆ ತಪ್ಪು ( ಕಲ್ಲು ಹಾಸಿಗೆಯ ಮೇಲೆ ಕುಳಿತು-ಕೊಳ್ಳುವನು. )

**ಶೀನಣ್ಣ:**— ನೀವೇನು ಮಾಡುವಿರಿ ಅದಕ್ಕೆ? ಮದಿವೆಯ ಮಾತಿ-ನಲ್ಲಿ ಎಲ್ಲರೂ ತಪ್ಪುವರು.... ಈಗ ನಾನು ಮದಿವೆ ಮಾಡಿಕೊಂಡದ್ದೊ ತಪ್ಪು....

**ಗೋಪಾ:**— ( ಆಶ್ಚರ್ಯದಿಂದ ) ನೀವು! ಯಾಕೆಂತೆಂದರೆ— ಈಗೆಲ್ಲಿ ನೀವು—

**ಶೀನಣ್ಣ:**— ( ನಡುವೆಯ ) ಈಗ ಅಂದರೆ ಈಗ ನಾನು ಮದಿವೆ ಮಾಡಿಕೊಂಡಿರುವೆ ಅಂತಲ್ಲ. ..ಮೊದಲನೆಯ ಮದಿವೆಯ ಮಾತನ್ನೆ ಹೇಳಿದೆ.. ಮದಿವೆಯೂ ಆಯಿತು.... ಮಕ್ಕಳೂ ಆದುವು ( ಒಳಕ್ಕೆ ಹೊರ-ಡುವನು ).

**ಗೋಪಾ:**— ( ಉದ್ವೇಗದಿಂದ ) ನಮ್ಮಾಕೆ ಸಂಸಾರ ಸುಖ, ಮಕ್ಕಳ ಸುಖ ಕಾಣದೆ ಹೋದಳು—

[ ಶೀನಣ್ಣನು ಒಮ್ಮೆಲೆ ತಿರುಗಿ ನಿಲ್ಲುವನು. ಅವನ ತಿರಸ್ಕಾರದ ನಗೆಯನ್ನು ನೋಡಿ ಆಚಾರ್ಯನು ತಡೆಯುವನು.. ಶೀನಣ್ಣನು ನಿಧಾನವಾಗಿ ಬಾಗಿಲು ಮುಚ್ಚಿಕೊಂಡು ಒಂದೊಂದೇ ಹೆಜ್ಜೆಯನ್ನು ಗಾಂಭೀರ್ಯದಿಂದಿಟ್ಟು ನಡೆದು ಬರುವನು. ಆಚಾರ್ಯನು ಹುಚ್ಚನಂತೆ ನೋಡುವನು ].

**ಶೀನಣ್ಣ:**— ( ತಿರಸ್ಕಾರದಿಂದ ) ಹುಚ್ಚಾ, ಬ್ರಾಹ್ಮಣಾ, ನನ್ನಾಕೆ ಮಕ್ಕಳ ಸುಖ ಕಂಡಳೆಂವೇ ಸತ್ತು ಹೋದಳು ಪ್ರಾಯದಲ್ಲಿ!.. ನನಗೆ ಆಗ ತಿಳಿಯಲಿಲ್ಲ.... ಅವಳಿಗೆ ತಿಳಿಹಿಸುವ ಧೈರ್ಯವಿರಲಿಲ್ಲ.... ( ಮುಂದಿನ ಮಾತನ್ನೆಲ್ಲ ತನ್ನಷ್ಟಕ್ಕೆ ನುಡಿಯುವವನಂತೆ ನುಡಿಯುವನು ) ಒಂದೊಂದು ಮಗು ಎಂದರೆ ಒಂದೊಂದು ಪ್ರಾಣವಾಗಿತ್ತು ಅವಳಿಗೆ.. ಐದು ಮಕ್ಕಳನ್ನು ಹಡೆದಮೇಲೆ ಅವಳ ಐದೂಪ್ರಾಣಗಳು ಹೋದುವು....ಆದರೆ ನಾನು–ನಾನು ಸರಳಬುದ್ಧಿಯ ಕಟುಕನಾದೆ.... ಮಗುವನ್ನು ಹೆತ್ತು ತಾಯಿಯು ಸಮೆಸಮೆದಂತೆ, ಕನಿಕರದಿಂದ ಅವಳಲ್ಲಿ ನನ್ನ ಪ್ರೀತಿಯೂ ಹೆಚ್ಚಿತು.. ನನಗೆ ಮಕ್ಕಳು ಬೇಡ, ಹೆಂಡತಿ ಬೇಕು ಎನ್ನಿಸಿತು.. ಅವಳಿಗೆ ಮಕ್ಕಳೂ ಬೇಡ, ಗಂಡನೂ ಬೇಡ ಎನ್ನಿಸಿರಬಹುದು.... ಶವಪ್ರಾಯಳಾದರೂ ಅವಳಿಗೆ ಸಂಸಾರ ಬಿಡಲಿಲ್ಲ.... ಹಾಲು ಮೊಸರಾಯಿತು, ಮೊಸರು ಹುಳಿಯಾಯಿತು, ಹುಳಿಯಲ್ಲಿ ನಂಜು ಸೇರಿತು.. ನಂಜಿನಿಂದ ಹಾಲಿನ ಪಾತ್ರೆಯೂ ಹಾಳಾಯಿತು.. ( ಕ್ರೂರನಗೆಯಿಂದ ) ಹಾವಿನಕಿಂತ ಹೆಚ್ಚು ವಿಷಮಯವಾದ ಸಂಸಾರ! ಆಚಾರ್ಯರೆ.. ಹಾವು ತನ್ನ ತತ್ತಿಗಳಲ್ಲಿಯ ಮರಿಗಳನ್ನು ನುಂಗಿದರೆ, ನಮ್ಮಲ್ಲಿ–ಮನುಷ್ಯರಲ್ಲಿ–ಮರಿಗಳೇ ತಾಯಿಯನ್ನು ನುಂಗುವವು.... "ಮಕ್ಕಳು ಬೇಡ, ಬೇಡ" ಎಂದು ತನ್ನ ಹೃದಯದಲ್ಲಿಯೆ ಹುದುಗಿಸಿಟ್ಟ ಅವಳ ಕೂಗು— ಅಂದು ಆ ಹೃದಯವು ಬೆಂಕಿಯಲ್ಲಿ ಸುಟ್ಟು ಒಡೆವಾಗ ಗುಡುಗಿನಂತೆ ನನ್ನ ಕಿವಿಯಲ್ಲಿ ಗಡುಚಾಯಿತು.... ಇಂದು ಕಿವುಡನಂತೆ ಅದೇ ಕೂಗನ್ನು ಜೋರಾಗಿ ನಾನು ಕೂಗುತ್ತಿರುವೆ.. ( ಒಮ್ಮೆಲೆ ಬೆದರಿದ ಆಚಾರ್ಯನನ್ನು ನೋಡಿ ಸಾಂತ್ವನಬುದ್ಧಿಯಿಂದ ) ನೀವು ನನ್ನಷ್ಟು ತಪ್ಪು ಮಾಡಿಲ್ಲ.. ನನ್ನಂತೆ ಹೆಂಡತಿಯನ್ನು ಸರಿಯಾಗಿ,

ಸಾವಕಾಶವಾಗಿ, ಸರ್ವತೋಮುಖಿಯಾಗಿ, ಸಣ್ಣಾಗಿ ಸವೆಸಿ, ಕೊಳೆಯಿಸಿ, ಕರಗಿಸಿ ಕೊಲ್ಲಲಿಲ್ಲ ನೀವು.... ( ಗಾಂಭೀರ್ಯ ತಾಳಿ ) ಇಂದು ಭಾವಿಯಲ್ಲಿ ಬಿದ್ದದ್ದು ನಿಮ್ಮ ನಾಲ್ಕನೆಯ ಹೆಂಡತಿ ಎಂದು ತಿಳಿಯಬೇಡಿರಿ. ..ಅವಳು ನಿಮ್ಮ ನೂರನೆಯ ಹೆಂಡತಿ, ನಿಮ್ಮ ಸಾವಿರನೆಯ ಹೆಂಡತಿ, ನಿಮ್ಮ ಎಂಭತ್ತು ಲಕ್ಷ ಜನ್ಮಗಳಲ್ಲಿಯ ನಿಮ್ಮ ಎಂಭತ್ತು ಕೋಟಿನೆಯ ಹೆಂಡತಿ— ಇನ್ನೂ ನಿಮ್ಮ ಮನಸಿನಲ್ಲಿದ್ದ ಎಲ್ಲ ನಿಮ್ಮ ಹೆಂಡಂದಿರು ಇಂದು ಭಾವಿ ಬಿದ್ದು ಮುಳುಗಿ, ಎರಡನೆಯವರು ಬೀಳದಂತೆ, ತಮ್ಮ ದೇಹಗಳಿಂದ ಭಾವಿಯನ್ನು ಮುಚ್ಚಿ ನೆಲಸಮ ಮಾಡಿರುವರೆಂದು ತಿಳಿಯಿರಿ— ನಾನು ಹೊರಗೆ ಹೋಗಿ ಬರುವದರೊಳಗಾಗಿ ಮುಖ ತೊಳೆದುಕೊಳ್ಳಿರಿ ( ಎಂದು ಒಳಕ್ಕೆ ಹೊರಡುವನು. ಗೋಪಾಲಾಚಾರ್ಯನು ದಂಗು ಬಡೆದು ಎದ್ದು ತಲೆ ಬಾಗಿಲಿಗೆ ಹೊರಡುವನು ).

**ಶೀನಣ್ಣ:—** ( ಒಮ್ಮೆಲೆ ತಿರುಗಿ ನಿಂತು ) ಇನ್ನೂ ಒಂದು ಮಾತು.. ನಾನು ಇದುವರೆಗೆ ಹೇಳಿದ್ದು ನಿಮ್ಮ ಹಿತಕ್ಕಾಗಿ.. ಅದನ್ನು ಯಾರ ಮುಂದೆಯೂ— ( ಗೋಪಾಲಾಚಾರ್ಯನು ಬಲವಾಗಿ ತಲೆ ಅಲ್ಲಾಡಿಸುವನು. ) ಅಷ್ಟು ಜೋರಾಗಿ ತಲೆ ಅಲ್ಲಾಡಿಸಬೇಡಿರಿ. ಒಳಗೆ ಏನೂ ಇಲ್ಲದ್ದರಿಂದ ಅದು ಎಲ್ಲರಿಗಿಂತಲೂ ಹಗುರಾಗಿದೆ ಎಂದು ಗೊತ್ತಿದೆ ನನಗೆ. ( ಗೋಪಾಲಾಚಾರ್ಯನು ತಲೆಬಾಗಿಲನ್ನು ತೆರೆಯುವದು ಲಕ್ಷಕ್ಕೆ ಬಂದು ಒಮ್ಮೆಲೆ ವಿಪರೀತವಾಗಿ ಗದ್ದರಿಸಿ) ಮುಚ್ಚೊ, ಬ್ರಾಹ್ಮಣಾ, ಆ ಬಾಗಿಲನ್ನು !.. ಮಹಾರಾಯಾ ! ನಿನ್ನ ತಲೆ ಎಂದರೆ ಹಿತ್ತಲಬಾಗಿಲು !.... ಹೊರಗೆ ಜನರ ಗಲಾಟೆ ಇದೆ ಎಂದು ಅದನ್ನು ಮುಚ್ಚಿದರೆ-ನೀನು—

**ಗೋಪಾ:—** ( ಕಳೆಗುಂದಿ ) ಹೊರಗೆ ಯಾರೂ ಇಲ್ಲ, ರಾಯರೆ, ಯಾಕೆಂತೆಂದರೆ ನೋಡಿದೆ—

**ಶೀನಣ್ಣ:—** ( ಒಪರುತ್ತಲೆ ) ಬಾಗಿಲು ತೆರೆಯಬೇಡ ಅಂದರೆ " ನೋಡಿದೆ " ಅಂತೆ !.... ಹೊರಗೆ ಜಾತ್ರೆ ಇದೆ !

**ಗೋಪಾ:—** ( ಮೋಲಿನಂತೆ, ಇನ್ನಿಷ್ಟು ಅಧೈರ್ಯದಿಂದ ) ಯಾ-ರೂ-ಇಲ್.. ಯಾಕೆಂತೆಂದರೆ—

**ಶೀನಣ್ಣ:—** ( ಬೇಜಾರವಾಗಿ ) ಛೆ! ಇವನ ಮುಂದೆ ತಲೆ ಒಡೆದು-ಕೊಂಡರೆ ಸರಿ. ( ಇಷ್ಟರಲ್ಲಿ ಮನೆಯ ಬಾಗಿಲು ಒಮ್ಮೆಲೆ ತೆಗೆದು ಗಾಬರಿಯಾದ ಸುಂದರಮ್ಮನು " ಶೀನಣ್ಣಾ, ರಾಮೂನ್ನ ಹಿಡಿಯಃಬಾರೊ '' ಎಂದು **ಕಳವಳದಿಂದ** ಚೀರುತ್ತ ಬರುವಳು ) ಏನು ?.... ಎಲ್ಲಿರುವ ?.. ಛೆ.. ( ಏನೂ ತಿಳಿಯದೆ ಅಲ್ಲಿಯೆ–ಸುತ್ತಾಡುವನು ) ಗುರುಸಿದ್ಧಾ–ಗುರುಸಿದ್ಧ ಎಲ್ಲಿ ?.... ಛೆ....

**ಸುಂದರಮ್ಮ:—** ( ಮುಂದೆ ಬಂದು ) ಗುರುಸಿದ್ಧ ಅವನನ್ನ ಹಿಡಿದಾನ.... ಮಾಳಿಗೆಯ ಮ್ಯಾಲ.... ( ಒಳಗೆ ನೋಡಿ, ಉದ್ವೇಗದಿಂದ ) ದೇವರೆ, ಏನು ನನ್ನ ಕೂಸಿನ ಗತಿ ?

**ಶೀನಣ್ಣ :—** ( ಏನೂ ತಿಳಿಯದೆ ಕಿರಚುತ್ತ ) ಕೂಸಿಗೇನಾಯಿತು ಮತ್ತೆ ? ಔಷಧ.... ( ಒಮ್ಮೆಲೆ ಸ್ಮರಣೆಗೆ ಬಂದು ) ಛೆ.... ಏನು ಈ ಹೆಂಗಸರು ?.. ಇನ್ನೂ ಕೂಸು ನಿನ್ನ ತಲೆಯೊಳಗಿಂದ ಹೋಗವಲ್ಲದಲ್ಲ—

**ಸುಂದರಮ್ಮ:—** ( ಕನಿಕರದಿಂದ ) ಹೋದದ್ದು ನನ್ನ ಕೂಸಲ್ಲ, ಅಣ್ಣಾ !— ( ಮುಂಪೆ ತೋರಿಸುತ್ತ )— ಇದು. ನನ್ನ ಕೂಸು. ಆಯ್ಯೋ ! ( ಎಂದು ಒಳಗೆ ಹೋಗುವಳು ).

( ಶೀನಣ್ಣನು ದಂಗು ಬಡೆದವನಂತೆ ಒಳಗಡೆ ನೋಡುತ್ತ ನಿಲ್ಲುವನು. ಗೋಪಾಲಾಚಾರ್ಯನೂ ಮುಂದೆ ಬಂದು ನೋಡಿ ಕಂಠ ತುಂಬಿ ಬಂದು— )

**ಗೋಪಾ:—** ಎಲಲ! ಇದೇನು ಅಂದೆ! ಯಾಕೆಂತೆಂದರೆ— ( ಮುಂದೆ ನಡೆದು ) ಇದೇನು ಅವಸ್ಥೆ ನಿನ್ನದು, ಆಯ್ಯೋ ! ರಾಮಣ್ಣಾ !

( ಒಮ್ಮೆಲೆ ತಲೆಬಾಗಿಲಿನಿಂದ ವೆಂಕಾಚಾರಿ ಒಡುತ್ತ ಬರುವನು. ಅವನ ಮುಖದಲ್ಲಿ ಉತ್ಕಂಠೆ ಮತ್ತು ಉತ್ಸಾಹ ಒಡೆದು ತೋರುವವು ).

**ವೆಂಕ:—** (ತೇಕುತ್ತ) ಎಲ್ಲಿದ್ದಾರೆ ? ಎಲ್ಲಿದ್ದಾರೆ ರಾಮಣ್ಣಾರಾಯರು? ( ಶೀನಣ್ಣನೂ ಗೋಪಾಲಾಚಾರ್ಯನೂ ಬೆದರಿದವರಂತೆ ತಿರುಗಿ ನಿಲ್ಲುವರು. ಅವರಿಬ್ಬರ ನಿರಾಶೆಯ ಮುಖಚರ್ಯೆಯನ್ನೂ ಒಳಗೆ ಅವರು ಇದುವರೆಗೆ ನೋಡುತ್ತಿದ್ದ ದೃಶ್ಯವನ್ನೂ ಕಂಡು ಅತ್ಯಂತ ಸೋಜಿಗವೆನ್ನಿಸಿ) ಎಲ ! ಇವೇನು !

ರಾಮಣ್ಣರಾಯರಿಗೆ ಅಪಘಾತವಾಗಿದೆಯೆ? ಹೀಗೇಕೆ ಅವರ ವೇಷ? ಇಷ್ಟೇಕೆ ನಿರುತ್ಸಾಹ?

**ಗೋಪಾ :—** ( ಕನಿಕರದಿಂದಲೂ ತಿರಸ್ಕಾರದಿಂದಲೂ ) ನಿನಗೇನು? ಯಾಕೆಂತೆಂದರೆ— ಎಲ್ಲರೂ ಅಳುವಾಗ ನೀನು ನಗುವವ!

**ವೆಂಕ :—** ( ಸೋಜಿಗಪಟ್ಟಿನಿಸಿ ) ಅಳುವಂತಹದೇನಾಗಿದೆ ಈಗ? ಎಲ್ಲರೂ ನಗೆಯಿಂದ ಹಿಗ್ಗುವ ಕಾಲ—

**ಶೀನಣ್ಣ :—** ( ಅವನ ಕೈ ಹಿಡಿದು ಮುಂದೆ ನಿಲ್ಲಿಸಿ ಒಳಗೆ ತೋರಿಸುತ್ತ ಗಾಂಭೀರ್ಯ ತಾಳಿ) ಅದೊ, ವೆಂಕಾ, ನಿಮ್ಮ ರಾಮಣ್ಣರಾಯರನ್ನು ನೋಡು! ನೋಡಿದೆಯಾ? ಮುಖದಲ್ಲಿ ಕಳೆಯಿಲ್ಲದೆ, ಮೈಯಲ್ಲಿ ಶಕ್ತಿ ಇಲ್ಲದವನಂತೆ, ಗುರುಸಿದ್ಧನ ಹೆಗಲಮೇಲೆ ಕಯ್ಯೂರಿ ಜೀವವಿಲ್ಲದ ಗೊಂಬೆಯಂತೆ ನಡೆದಿರುವ! ನಗುವೆಯಾ ಅವನನ್ನು ನೋಡಿ?

**ವೆಂಕ :—** ( ನಿಮಿಷಾರ್ಧ ಅನುಮಾನಿಸಿ ಒಮ್ಮೆಲೆ ನಿರ್ಧಾರದಿಂದ ) ನಗುವೆ— ಹೊಟ್ಟೆ ಹಿಡಿಸದಷ್ಟು ನಗುವೆ. ಆನಂದದಿಂದ ತುಂಬಿತುಳುಕಿ ನಗುವೆ, ಅಭಿಮಾನದಿಂದ ತಲೆತೂಗಿ ನಗುವೆ—

**ಗೋಪಾ :—** ( ತಡೆಯದೆ ) ನಿನ್ನ ತಲೆ ಕಡಿದುಬೀಳಲಿ! ಎಲೊ— ಯಾಕೆಂತೆಂದರೆ— ತಪ್ಪಿಯಾದರೂ ಕಾಲಕ್ಕೆ ಸರಿಯಾಗಿ ಮಾತನಾಡೊ— ( ಒಳಗೆ ಹೊರಡುವನು ).

**ವೆಂಕ :—** (ತಿರಸ್ಕಾರದಿಂದ) ಅದನ್ನೆ ನಿಮಗೆ ಹೇಳಲು ಬಂದಿರುವೆ.. ಹೊಸ ಕಾಲಕ್ಕೂ ಹಳೆಯ ಮಾತನ್ನೆ ನುಡಿಯುವ ನಿಮಗೆ—

**ಗೋಪಾ:—**(ಬಾಗಿಲಿನಲ್ಲಿ ತಿರುಗಿ ನಿಂತು ಅಸಹ್ಯದಿಂದ)ತಿಳಿಗೇಡೀ!— ಯಾಕೆಂತೆಂದರೆ— ಸತ್ತ ವೇಳೆ, ಕೆಟ್ಟವೇಳೆ ಅಶುಭ ಎಂದಾದರೂ ಕಲ್ಪನೆ ಮಾಡೋ—

**ವೆಂಕ :—** ( ಮೇಲಿನಂತೆ ) ಹಿಂದಿನಿಂದ ಹಳಸಿದ್ದೆಲ್ಲ ತೊಳೆದು ಹೋಗುವದೊಂದು ಶುಭ ಎಂಬ ಕಲ್ಪನೆ ಇದೆಯೆ ನಿಮಗೆ? ಶುಭಕ್ಕಾಗಿ,

ತತ್ವಕ್ಕಾಗಿ ಸಾಯುವದು— (ಮಾತು ಮುಗಿಸುವದರೊಳಗಾಗಿ ಗೋಪಾಲಾ-ಚಾರ್ಯನು ಏನನ್ನೊ ಮಾತನಾಡಬೇಕೆಂಬುದನ್ನು ತಡೆದು ಸಿಟ್ಟಿನಿಂದ ಬಾಗಿಲನ್ನು ಬಲವಾಗಿ ನೂಕಿ ಹೊರಟುಹೋಗುವನು ).

**ಶೀನಣ್ಣ:—** ( ಕನಿಕರದಿಂದ ನೋಡಿ ) ಹುಚ್ಚಾ, ವೆಂಕಾ, ನೀನಿನ್ನೂ ಹುಡುಗ.... ನಿಮ್ಮ ರಾಮಣ್ಣನು ನಿನಗೆ ತತ್ವ ; ನನ್ನ ರಾಮಣ್ಣನು ನನಗೆ ಮಗ.... (ಕಳಕಳಿಯಿಂದ) ನನ್ನ ಆಯುಷ್ಯವನ್ನು ಅರೆದು, ಕೊರೆದು ಕಾಯ್ದಿಟ್ಟ ಮಗ.. ಮುಪ್ಪಿನಿಂದ ಉಳಿಯದ ನನ್ನ ದೇಹವನ್ನು ಉಳಿಸುವ ಮಗ.. ಮುಪ್ಪಿನಿಂದ ತಿಳಿಯದ ನನ್ನ ಬುದ್ಧಿಗೆ ತಿಳಿಸುವ ನನ್ನ ಮಗ.. (ಕಂಠ ತುಂಬಿ ಬಂದು)ನೋಡಿದೆಯಾ ಅವನು ಹೆಜ್ಜೆ ಇಡುತ್ತ ಹೋದುದನ್ನು? ನೋಡಿದೆಯಾ ಅವನ ಹಣೆಗೆ ಕಟ್ಟಿದ ಬಟ್ಟೆಯ ಪಟ್ಟಿಯನ್ನು ?.. ದೇಹಕ್ಕೆ ಶ್ರಮ, ಬುದ್ಧಿಗೆ ಭ್ರಮ.... ( ಉದ್ವೇಗದಿಂದ ) ಇದನ್ನು ನೋಡಿ ನಗು ಎಂದು ಹೇಳುವೆಯಾ ?

**ವೆಂಕ :—** ( ಏನೂ ತಿಳಿಯದೆ ) ನಿಮ್ಮ ಮಗ ಎಂಬುದು ಅಭಿಮಾನ-ವಲ್ಲವೆ? ಇಂತಹರು ನಿಮ್ಮ ಮಗ ಎಂದು ಆನಂದದಿಂದ ಕಣ್ಣೀರು ತುಳುಕುವದಿಲ್ಲವೆ ? ಹಿತಕ್ಕಾಗಿ, ಸತ್ಯಕ್ಕಾಗಿ, ತತ್ವಕ್ಕಾಗಿ ತನ್ನ ದೇಹವನ್ನು ಬಿಟ್ಟುಬಿಡುವ ಮಗನೆಂದು—

**ಶೀನಣ್ಣ:—** ( ನಡುವೆಯೆ ) — ಅವನಿಗೆ ದೇಹವನ್ನು ಕೊಟ್ಟ ತಂದೆಗೆ ಆನಂದವಾಗಬೇಕಲ್ಲವೆ ?.... ನೀನಿನ್ನೂ ಹುಡುಗ ಎಂದು ಹೇಳಿದ್ದು ಅದಕಾಗಿಯೆ.. ( ಅವನ ಭುಜದ ಮೇಲೆ ಕಯ್ಯಿಟ್ಟು ) ಬಲಿಯುವ ದೇಹಕ್ಕೆ ದೇಹದ ಬೆಲೆಯಿಲ್ಲ ; ಬೆಳಿಸಿದವನಿಗ ತಿಳಿಯುವದು ಆ ದೇಹದ ಬೆಲೆ.. ( ಒಮ್ಮೆಲೆ ತಿರಸ್ಕಾರದಿಂದ ) ಸತ್ಯ ! ತತ್ವ !.. ಇವೆಲ್ಲಾ ಅರಿಯದ ಅಬ್ಬರ, ಹರೆಯದ ಗೊಬ್ಬರ.. ಅನುಭವದ ಬೆಂಕಿಯಲ್ಲಿ ಕ್ಷಣಮಾತ್ರದಲ್ಲಿ ಉರಿದು ಹೋಗುವದು.. ( ಮತ್ತೆ ಸಮಾಧಾನದಿಂದ ) ನೀನಿನ್ನೂ ಹುಡುಗ.. ಆಯುಷ್ಯದ ತೊಟ್ಟಿಲನ್ನು ಬಿಟ್ಟಿಲ್ಲ.. ಕಲ್ಲಿನಂತೆ ಬಿರುಸಾದ ಕೆಳಗಿನ ನೆಲ ನಿನಗೆ ಗೊತ್ತಿಲ್ಲ, ಕಾಡಿಗೆಯಿಂದ ಹೊಲಸಾದ ಮೇಲಿನ ಅಂಕಣ ನಿನಗೆ ಕಾಣಿಸಿಲ್ಲ.. ( ಬೆನ್ನು ಮೇಲೆ ಕಯ್ಯಾಡಿಸುತ್ತ ) ಕಲ್ಪನೆಯ ಕನಸಿನಲ್ಲಿ

ತೂಗಾಡುವೆ ಇನ್ನೂ (ವೆಂಕಾಚಾರಿಯು ಆಶ್ಚರ್ಯದಿಂದ ತನ್ನನ್ನು ದಿಟ್ಟಿಸಲು ಬೇರೆ ಕಡೆಗೆ ನೋಡಿ ತನ್ನಷ್ಟಕ್ಕೆ ಮಾತಾಡುವಂತೆ) ಸತ್ಯವಂತೆ! ನಾಳೆ ಧರ್ಮೇ ಚ ಅರ್ಥೇ ಚ ಕಾಮೇ ಚ— ಎಂದು ಮೂರಾವರ್ತಿ ಸುಳ್ಳು ಹೇಳಿ ಹೆಂಡತಿಯನ್ನು ತಂದೆಯೆಂದರೆ ತಿಳಿಯುವದು ನಿನಗೆ ಸತ್ಯ! (ತ್ವೇಷದ ದನಿಯಲ್ಲಿ) ಮನುಷ್ಯಧರ್ಮವನ್ನು ಬಿಟ್ಟು, ಮನಸ್ಸಿನ "ಅರ್ಥ"ವನ್ನೆಲ್ಲ ಕಟ್ಟಿಟ್ಟು, ಕಾಮದ ಬುಟ್ಟಿ ಎಂದು ಸಂಸಾರ ಹೂಡಿದೆ ಎಂದರೆ ತಿಳಿಯುವವು ನಿನಗೆ ಸತ್ಯ! ಧರ್ಮವೆಂದು ಹುಡುಗೆಯನ್ನು ಕೊಂದು, ಅರ್ಥವೆಂದು ಹುಡುಗೆಯ ತಂದೆಯನ್ನು ಕೊಂದು, ಕಾಮವೆಂದು ಹುಟ್ಟಿದ ಮಕ್ಕಳನ್ನು ಕೊಂದೆ ಎಂದರೆ ತಿಳಿಯುವದು ನಿನಗೆ ಸತ್ಯ!

**ವೆಂಕ:**— (ಉತ್ಸಾಹಗೊಂಡು) ಅದು ಸತ್ಯವಲ್ಲ, ಸೋಗು; ಅದನ್ನು ಬೈಲಿಗೆಳೆಯುವದೇ ನಮ್ಮ ತತ್ವ.

**ಶೀನಣ್ಣ:**— (ಅವನ ಎರಡೂ ಭುಜಗಳನ್ನು ಎರಡು ಕೈಗಳಲ್ಲಿ ಹಿಡಿದು) ಹುಡುಗ! ಹುಡುಗ!.. ಯಾವದನ್ನು ಬೈಲಿಗೆಳೆಯುವೆ?.. ಅದು ಎಂದರೆ ನೀನೇ.. ಅದನ್ನು ಬೈಲಿಗೆಳೆದರೆ ನಿನ್ನನ್ನೆ ಬೈಲಿಗೆಳೆದಂತೆ– ಮೊದಲು ಮಾತನಾಡಿದ ನಾಲಗೆಯನ್ನು ಹೊರಗೆಳೆದಂತೆ! ನಾಲಗೆಯನ್ನು ಹೊರಗೆಳೆದರೆ ಮುಖವು ಹೇಗೆ ಕಪ್ಪಾಗಿ, ಕಠೋರವಾಗಿ, ಕರಾಳವಾಗಿ ಕಳೆಗುಂದುವುದೊ– ಹಾಗೆಯೆ ಅದನ್ನು ಬೈಲಿಗೆಳೆದರೆ ನಿನ್ನ ಸ್ಥಿತಿಯಾಗುವದು..

**ವೆಂಕ:**— (ಆವೇಶದಿಂದ) ಆಗಲಿ.. ದೇಹವು ಕಳೆಗುಂದಲಿ, ಸುಟ್ಟು ಬೂದಿಯಾಗಲಿ—

**ಶೀನಣ್ಣ:**— (ಬಿಗಿಯಾಗಿ ಹಿಡಿದು) ಆಗಿಯೇ ಆಗುವದು— ಆಮೇಲೆ ಯಾರೂ ನಿನ್ನನ್ನು ಗುರುತಿಸುವದಿಲ್ಲ.. ಬೈಲಿಗೆಳೆದದ್ದರ ಲಾಭವೇನು ಎರಡನೆಯವರಿಗೆ ಅದರ ಗುರುತು ಸಿಕ್ಕಲಿಲ್ಲವೆಂದರೆ? ಈಗೇನು ಹೊರಗೆಳೆಯುವೆ? ಹೀಗೆ ಮಾಡಿ ಮಡಿದ ಹೆಂಡತಿಯ ಗಂಡ ನಾನು ಎಂದು ಹೊರಗೆಳೆಯಲೆ?.. "ಪಾಪಿ" ಎಂದು ಉಗುಳುವರು ನನ್ನನ್ನು.. ಹೀಗೆ ಮಾಡಿ ಮಡಿಯುವ ಮಗಳ ತಂದೆ ನಾನೆಂದು ಹೊರಗೆಳೆಯಲೆ?

"ಕ್ರೂರ" ಎಂದು ಕಲ್ಲು ಒಗೆಯುವರು ನನಗೆ.. ಹೀಗಾದುದಕ್ಕೆ ನಿನ್ನ ತಾಯಿಯು ಭಾವಿಬಿದ್ದಳೆಂದು ಬೈಲಿಗೆಳೆಯುವದೆ?

**ವೆಂಕ:—** (ನಡುವೆಯೆ ಹಟದಿಂದ) ಅಗತ್ಯವಾಗಿ. ತಾಯಿಯಾಗಲಿ, ತಂದೆಯಾಗಲಿ, ಮಕ್ಕಳಾಗಲಿ, ಮನೆಯಾಗಲಿ— ಕೊಳೆಯುವದನ್ನು ಬೈಲಿಗೆಳೆಯಲೇಬೇಕು.. ಇಲ್ಲವಾದರೆ ಉಳಿದದ್ದೆಲ್ಲ ಕೊಳೆತು—

**ಶೀನಣ್ಣ:—** (ಅಡ್ಡ ಮಾತನಾಡಿ) ನಾನೂ ಅದನ್ನೆ ಹೇಳುತ್ತಿದ್ದೆ.. ನಿನ್ನ ವಯಸ್ಸಿನವನಿದ್ದಾಗ ಅದನ್ನೆ ಹೇಳುತ್ತಿದ್ದೆ....

**ವೆಂಕ:—** (ತಿರಸ್ಕಾರದಿಂದ) ಹೇಳುವವರು ಬೇಡ ನಮಗೆ; ಹೆಳವರಂತೆ ಕೂತು ಹರಟೆಹೊಡೆಯುವವರು ಬೇಡ ನಮಗೆ—

**ಶೀನಣ್ಣ:—** (ಅಡ್ಡ ಮಾತನಾಡಿ) — ಹೇಳಿದಂತೆ ಮಾಡುವವರು ಬೇಕಲ್ಲವೆ?.... ಆ ಮಾತನ್ನೂ ನಾನು ಹೇಳುತ್ತಿದ್ದೆ.... ನಿನ್ನನ್ನು ನೋಡುವಾಗಲೆಲ್ಲ ನನ್ನ ತಾರುಣ್ಯವೆ ನನ್ನನ್ನು ನಾಚಿಕೆಗೊಳಿಸಲು ಮುಂದೆ ನಿಂತಂತೆ ತೋರುವದು .... ಆದರೆ ನಾನೀಗ ಸಂಸಾರಿಗ .... ನಾಚಿಕೆಯು ಗೃಹಸ್ಥಾಶ್ರಮದ ವ್ರತ-ನಿಯಮಗಳಲ್ಲಿ ಬರುವದಿಲ್ಲ.. ನಿನಗೂ ತಿಳಿಯುವದು.. ಜೀವಕ್ಕೆ ಅಪಾಯವಾದಾಗ ತಾಯಿಯ ಮಗು ಎಂದು ನೆನೆದು, ಶಾಲೆಯಲ್ಲಿ ಕಲಿಯುವಾಗ ತಂದೆಯ ಮಗನೆಂದು ಮೆರೆದು, ಸಂಸಾರ ಹೂಡುವಾಗ ಹೆಂಡತಿಯ ಗಂಡನೆಂದು ಅರಿತು, ಬುದ್ಧಿ ಬರುವಷ್ಟರಲ್ಲಿ ಮಕ್ಕಳ ತಂದೆಯಾಗುವವನಿಗೆ ತಿಳಿದುಬರುವದು.... ಆ ಮೇಲೆ ಹಳಿಯುವ ಅಧಿಕಾರವಿಲ್ಲ, ಹೇಳುವ ಯೋಗ್ಯತೆ ಇಲ್ಲ.... ಆ ಮೇಲೆ ಹೇಳುವದು ತತ್ವವಲ್ಲ, ಕಥೆ, ಪುರಾಣ ಪುಣ್ಯ-ಕಥೆ, ಎಂದೋ ಎಲ್ಲಿಯೋ ನಡೆದು ಹೋಯಿತೆಂಬ ಕಥೆ .... ಈಗ ನಾನು ಬೈಲಿಗೆಳೆಯಲು ಹೇಳುವದಿಲ್ಲ. ಆದದ್ದನ್ನು ಮುಚ್ಚಿರಿ ಎಂದು ಹೇಳುವೆ; ಆದದ್ದನ್ನು ಮುಚ್ಚುವ ಮೋಸತನ ಕೊಡು ಎಂದು ಗುಡಿಯ ದೇವರಿಗೆ ಕೈಮುಗಿಯುವೆ, ಆದದ್ದನ್ನು ಮುಚ್ಚುವ ಮೋಸಕ್ಕೆ ಆಶೀರ್ವಾದ ಕೊಡಿರಿ ಎಂದು ಮಠದ ಸ್ವಾಮಿಗೆ ಕೈತುಂಬ ಹಣವನ್ನು ಕೊಡುವೆ, ಆದದ್ದನ್ನು ಮುಚ್ಚಿಡುವ ಮೋಸತನ ಮರೆಯಿರಿ ಎಂದು ಮೇಲಿನಧಿಕಾರಿಗಳಿಗೆ ಕೈಯಿಂದ ಮರ್ಯಾದೆಯನ್ನು

ನೀಡುವೆ.... ನೀನಿನ್ನೂ ಹುಡುಗ, ವೆಂಕಾ .. (ಎಂದು ಏನೂ ತೋಚದೆ ಸುತ್ತಾಡುತ್ತ ಕೊನೆಗೆ ಕಲ್ಲುಹಾಸಿಗೆಯ ಮೇಲೆ ಕುಳಿತುಕೊಳ್ಳುವನು).

**ವೆಂಕ:—** (ಸುಳ್ಳು ನಗೆಯಿಂದ) ನೀವಿಷ್ಟು ನೊಂದುಕೊಳ್ಳುವ ಕಾರಣವಿಲ್ಲ.... ಸದ್ಯಕ್ಕೆ ಯಾವದನ್ನೂ ಮುಚ್ಚಿಡುವ ತೊಂದರೆ ನಿಮಗಿಲ್ಲ.... ಎಲ್ಲವನ್ನೂ—

**ಶೀನಣ್ಣ:—** (ಕೆರಳಿ) ಎಲ್ಲವನ್ನೂ ಮುಚ್ಚಿಡುವದು ಎಂದರೆ ಎಲ್ಲರ ಬಾಯಿಯನ್ನು ಮುಚ್ಚುವದು— ಮನೆಯ ಬಾಗಿಲನ್ನು ಮುಚ್ಚುವದು— ಮನಸಿನಲ್ಲಿಯ ಮಾತನ್ನೆಲ್ಲ ಮುಚ್ಚುವದು.

**ವೆಂಕ:—** ನಿಮ್ಮ ಮಾತು ನೀವು ಮುಚ್ಚಬಹುದು .... ನಮ್ಮ ಮಾತು ಹೇಳಿದೆ .... ನಿಮಗೆ ಕೂಡ ಇನ್ನು ಮುಚ್ಚುವದು ಶಕ್ಯವಿಲ್ಲ— ಅದನ್ನೆ ಹೇಳಲು ಬಂದಿರುವೆ ....

**ಶೀನಣ್ಣ:—** ನನಗೆ ಹೇಳಲು!.... ನಿನ್ನಂತೆ ನಾನು ತತ್ವದವನಲ್ಲ..

**ವೆಂಕ:—** (ದ್ವೇಷದ ದನಿಯಲ್ಲಿ) ನಾನು ಹೇಳಲು ಬಂದದ್ದು ನಿಮಗಲ್ಲ, ರಾಮಣ್ಣರಾಯರಿಗೆ—

**ಶೀನಣ್ಣ:—** (ತಿರಸ್ಕಾರದಿಂದ) ನಿಮ್ಮ ರಾಮಣ್ಣರಾಯರಿಗೆ ನನ್ನ ಅನುಭವವಿಲ್ಲ—

**ವೆಂಕ:—** (ಅಸಹ್ಯದಿಂದ) ನಿಮ್ಮಂತೆ ಮುಚ್ಚಿಡುವ ಅನುಭವವಿಲ್ಲ—

**ಶೀನಣ್ಣ:—** (ಕಿವಿ ಹಿಂಡಿ ಹೇಳುವವನಂತೆ) ಮಾಡುವ ಅನುಭವ-ವಿದ್ದರಿಗೆಯೆ ಮುಚ್ಚಿಡುವ ಅನುಭವ.... ಹುಡುಗಾ, ಹುಡುಗಾ, ಮುಚ್ಚಿ-ಡುವದೆಂದರೆ ಕೆಟ್ಟದ್ದಲ್ಲ, ಕೆಟ್ಟಕೆಲಸವನ್ನೆ ಮುಚ್ಚಿಡುವರೆಂದಲ್ಲ.

**ವೆಂಕ:—** (ಅಣಕಿಸಿಂದ) ನನಗೆ ಯಾಕೆ ಆ ಮಾತು? ನನಗಿನ್ನೂ ಅನುಭವವಿಲ್ಲ.. ನಾನು ಇನ್ನೂ ಕೆಟ್ಟದ್ದನ್ನು ಮಾಡಿಲ್ಲ.. ನನಗಿನ್ನೂ ಮದಿವೆಯಾಗಿಲ್ಲ.. ಆದ್ದರಿಂದ ಇನ್ನೂ ನನ್ನ ಹೆಂಡತಿ ಸತ್ತಿಲ್ಲ.. ಆದ್ದರಿಂದ ಎರಡನೆಯ ಹೆಂಗಸರೊಡನೆ ರಹಸ್ಯವಾಗಿದ್ದು—

**ಶೀನಣ್ಣ:—** ( ಸಿಟ್ಟು ತಡೆಯುತ್ತ ) ನೀನಿನ್ನೂ ಹುಡುಗ, ತಿಳಿಯದೆ ಮಾತನಾಡುವೆ ಎಂದು ಸಹಿಸಿಕೊಳ್ಳುವೆ.

**ವೆಂಕ:—** ಇದು ನನ್ನ ಮಾತಲ್ಲ.. ತಿಳಿಯದ ಹುಡುಗನ ಮಾತಲ್ಲ.. ತಿಳಿದ, ಅನುಭವದ ಹಿರಿಯರ ಮಾತು.. ಹಿರಿತನದ ಲಕ್ಷಣವೆನ್ನಿಸುವ ಮಾತು.. ದೊಡ್ಡವರ ದಿನದ ವ್ಯವಹಾರದ ಮಾತು.. ನೀವು ಕೃಷ್ಣಾ-ತಾಯಿಯೊಡನೆ —

**ಶೀನಣ್ಣ:—** ( ಗದ್ದರಿಸಿ ) ಬಾಯಿಮುಚ್ಚು.. ಇಲ್ಲವಾದರೆ— (ಎಂದು ರಭಸದಿಂದ ಎದ್ದು ಬರುವನು).

**ವೆಂಕ:—** ( ಬಂದುದಕ್ಕೆ ಎದುರಾಗುವ ಬಂಟನಂತೆ ) ಮುಚ್ಚುವದು ನನ್ನ ತತ್ವವಲ್ಲ.. ನನಗೆ ಹೆದರಿಸಬೇಡಿರಿ. ತತ್ವಕ್ಕಾಗಿ ಜೀವ ಕೊಡುವವ-ರಲ್ಲಿ ನಾನೊಬ್ಬ ಎಂದು ಹೇಳಿಲ್ಲವೆ ? ಮಾಡಿದ್ದನ್ನು ಮುಚ್ಚುವ ನಿಮ್ಮಂತಹ ಹಿರಿಯರ ಮಾತಿನಲ್ಲಿ ವಿಶ್ವಾಸವಿಟ್ಟು ನಾನಿದನ್ನು ಹೇಳಿಲ್ಲ.. ಇದು ರಾಮಣ್ಣರಾಯರ ಮಾತು—

**ಶೀನಣ್ಣ:—** ( ಉದ್ವೇಗದಿಂದ ) ಅಯ್ಯೋ! ಅಯ್ಯೋ! ಏನು ಮಾಡಲಿ ? ( ವೆಂಕನಿಗೆ ಗದ್ದರಿಸಿ ) ಅವನ ಬುದ್ಧಿಗೆ ಭ್ರಮ ಇದೆ ಎಂದು ಹೇಳಲಿಲ್ಲ-ವೇನೊ ?.. ಎಲ ! ಎಲ ! ಎಂತಹ ಅನ್ಯಾಯ !.... ದೇವನೇ ಸಾಕ್ಷಿ !

**ವೆಂಕ:—** ( ತಿರಸ್ಕಾರದಿಂದ ) ಅವನು ನಿಮ್ಮ ದೇವ-ಕೇಳುವದೇನು ? ಅವನಿಗೂ ಮುಚ್ಚುವ, ಕಣ್ಣುಮುಚ್ಚುವ ರೂಢಿ ಇದೆ, ಅಲ್ಲವೆ ?

**ಶೀನಣ್ಣ:—** ( ಕೆರಳಿ ) ಎಲ ! ತುಂಟಾ ! ಕಿಡಿಗೇಡಿ ! ನಿನ್ನ ಕಣ್ಣು ತೆರೆಯುಬಾರದೆ ? ನೀವೆಲ್ಲರೂ ಕೂಡಿ ನನ್ನ ಹುಡುಗನಿಗೆ-ಅಯ್ಯೋ ! ಏನು ಮಾಡಲಿ ?

**ವೆಂಕ:—** ( ಗಾಂಭೀರ್ಯ ತಾಳಿ ) ನಾನು ಹೇಳುವೆ. ಎಲ್ಲವನ್ನೂ ಮುಚ್ಚಿಟ್ಟು ಅವಳನ್ನು ಮದಿವೆಯಾಗಿರಿ.

**ಶೀನಣ್ಣ:—** ( ಹುಚ್ಚೆದ್ದು ) ಎಲೊ ! ನಿನ್ನ ತತ್ವ ಹಾಳಾಗಲಿ ! ಅವಳು-ಅವಳು-ಅಯ್ಯೋ ! ಅವಳು ರಾಮಣ್ಣನ ಮದಿವೆಯ ಹೆಂಡತಿ !

ವೆಂಕ:— ( ಹೌಹಾರಿದವನಂತೆ ) ಏನು !

ಶೀನಣ್ಣ:— ( ಹಣೆಬಡೆದುಕೊಂಡು ) ನಿನ್ನ ತಲೆ-ನನ್ನ ದುರ್ದೈವ! ( ಏನೂ ತಿಳಿಯದೆ ಕಲ್ಲು ಹಾಸಿಗೆಯ ಮೇಲೆ ಕುಳಿತುಕೊಳ್ಳುವನು ).

ವೆಂಕ:— ( ಮುಂದೆ ಬಂದು ಅವನನ್ನು ದಿಟ್ಟಿಸಿ ಅತ್ಯಂತ ಅಸಹ್ಯವಾಗಿ ) ನಿಮಗೆ ತಲೆ ಇದ್ದುದೆ ನಮ್ಮ ದುರ್ದೈವವಾಗಿದೆ! ರಾಮಣ್ಣನ ಹೆಂಡತಿ! ನಿಮಗೆ ಏನಾಗಬೇಕು ಗೊತ್ತಿಲ್ಲವೆ?

ಶೀನಣ್ಣ:— ( ಕಳವಳದಿಂದ ) ಅವಳು ನನ್ನ ಸೊಸೆ— ನನಗೆ ಮಗಳಂತೆ! ಅಯ್ಯೊ!

ವೆಂಕ:— ( ಅಣಕಿನಿಂದ ) ಮಗಳಿಂದ ಮೇಲೆ ಮಾತು ಮುಗಿಯಿತಲ್ಲವೆ? ಅವಳ ಆಯುಷ್ಯವನ್ನೆಲ್ಲ ಹಾಳುಗೆಡಿಸುವ ಅಧಿಕಾರ ಬಂದಿತಲ್ಲವೆ? ( ಶೀನಣ್ಣನು ಕೆಳಗೆ ನೋಡುತ್ತ ತಲೆ ಜಾಡಿಸುವನು ) ಇಷ್ಟಕ್ಕೆ ಮಾತ್ರ ನಿಮ್ಮ ತಲೆ! ಮಾಡಿದ್ದನ್ನು ನೋಡಲಾಗದೆ, ಬಂದವರಿಗಾಗಿ ನಾಲಗೆ ಚಾಚಿ ಜೋತುಬೀಳುವ ಗುಡಿಯ ಗಂಟೆಯಂತಹ ತಲೆ!

ಶೀನಣ್ಣ:— ( ಕನಿಕರದಿಂದ ) ವೆಂಕಾ, ವೆಂಕಾ, ನನ್ನ ಮಾತಿನಲ್ಲಿ ವಿಶ್ವಾಸವಿಲ್ಲವೆ?

ವೆಂಕ:— ( ಸಿಟ್ಟಿಗೆದ್ದು ) ಇದೇ ಇದೇ ಮಾತು! ಗುಡಿಯ ಗಂಟೆಯಂತೆ ಒಂದೇ ಒಂದೇ ಕೂಗು. ಮಾಡಿದ್ದನ್ನೆಲ್ಲ ಮುಚ್ಚುವ ಜಾಣತನದ ತತ್ತ್ವೋಪದೇಶ ಮಾಡಿ — ಈಗ ಮುಚ್ಚಿದ್ದು ಸುಳ್ಳೆಂದು ಹೇಳಿದರೆ ವಿಶ್ವಾಸವಿಡಬೇಕೆ?

ಶೀನಣ್ಣ:— ( ಹತಾಶನಂತೆ ನಡೆದು ಬಂದು ) ವೆಂಕಾ, ವೆಂಕಾ, ನಿನಗೆ ಬುದ್ಧಿ ಇದೆ, ವಿಚಾರ ಮಾಡಿ ನೋಡು.. ತಪ್ಪನ್ನು ಮುಚ್ಚಬೇಕೆಂದು ಮಾಡಿದಲ್ಲಿ, ಮುಚ್ಚಿದ್ದು ತಪ್ಪಾಗಿದೆ, ವೆಂಕಾ.. ಅವಳು ನನ್ನ ಸೊಸೆ. ಮದಿವೆಯು ಶಿಷ್ಟಾಚಾರವಾಯಿತು, ಶಿಷ್ಟಾಚಾರವಂತೆ ಹಣದ ತಂಟೆ ಎದ್ದಿತು, ಶಿಷ್ಟಾಚಾರಕ್ಕೆಂದು ಮನೆಯ ಸೊಸೆಯನ್ನು ಅಂಗಣದಲ್ಲಿಯ ಕಾಗೆಯಂತೆ ಹೊಡೆದೋಡಿಸಿದೆ, ಕುಲಾಚಾರವೆಂದು, ಸಾಯುವ ಹೆಂಡತಿಯ

ಸಮಾಧಾನಕ್ಕೆಂದು ಸೊಸೆಗೆ ಶಾಶ್ವತ ಬಹಿಷ್ಕಾರವೆಂದೆ.. ತಪ್ಪು, ವೆಂಕಾ, (ದೈನ್ಯದಿಂದ) ಇದೆಲ್ಲಾ ತಪ್ಪು ಎಂದು ನನಗೆ ಗೊತ್ತಿದೆ.. ಅದಕಾಗಿಯೆ ತಪ್ಪು ಒಪ್ಪಿಕೊಳ್ಳಬೇಕೆಂದು ಸೊಸೆಗೆ ಶಿಕ್ಷಣವನ್ನು ಕೊಡಿಸಿದೆ.. ಮನೆಯಲ್ಲಿ ಮಾಡುವವರಿಲ್ಲದಾಗ, ಮನೆಯ ಒಬ್ಬಳೇ ಸೊಸೆಗೆ ಶಿಕ್ಷಣ ಕೊಡಿಸುವದು ತಡೆಯಲಿಕ್ಕಿಲ್ಲ ನನ್ನ ತಂಗಿಗೆ ಎಂದು— ಆ ಹುಡುಗೆ ನನ್ನ ಸೊಸೆ ಎಂದು ಯಾರಿಗೂ ಹೇಳಲಿಲ್ಲ.. ವೆಂಕಾ, ನಿನಗೆ ಹೇಳಿದೆ.. ಇದೊ—ಎಲ್ಲರಿಗೂ ಹೇಳುವೆ.. ನನ್ನನ್ನು ಉಳಿಸು— ನನ್ನ ಮಗನನ್ನು ನನಗಾಗಿ ಉಳಿಸು.. ಬುದ್ಧಿಶಾಲಿ ನೀನು.. ರಾಮಣ್ಣನಿಗೆ ತಿಳುಹಿಸು, ತಿದ್ದು.

**ವೆಂಕ:—** (ವಿಚಾರಮಾಡಿ) ಯಾರಿಗೆ ತಿಳುಹಿಸುವದು? ಯಾರನ್ನು ತಿದ್ದುವದು?.... (ತಿರಸ್ಕಾರದಿಂದ) ಹಂ.. ನಿಮ್ಮ ಶಿಷ್ಟಾಚಾರ! ನಿಮ್ಮ ಕುಲಾಚಾರ! (ಕೆರಳಿ) ಅವನ್ನೆಲ್ಲ ತಿದ್ದಲು ಇಂದು ರಾಮಣ್ಣರಾಯರೆ ಸಮರ್ಥರಿದ್ದಾರೆ .... ನಾನು ತಿಳುಹಿಸಬೇಕೆ? ಯಾರಿಗೆ? ಪರಾನ್ನವನ್ನು ನುಂಗಿ, ಪರರ ಸುಖವನ್ನು ಹೀರಿ, ಪರರ ಪ್ರಾಣವನ್ನು ಹಾವು ಹವೆ ತಿನ್ನುವಂತೆ ತಿಂದು ವಿಷ ತೇಗುವ ಈ ಊರ ಬ್ರಾಹ್ಮಣರಿಗೆ ತಿಳುಹಿಸಬೇಕಲ್ಲವೆ? ಅವರು ನಿಮಗೆ ಪೂಜ್ಯರಲ್ಲವೆ?.... ತಿಳುಹಿಸಿದರೆ ಇದನ್ನು ಒಪ್ಪುವರೊ, ಇಲ್ಲವೆ ನಿಮ್ಮ ಮುಖಕ್ಕೆ ಇನ್ನಿಷ್ಟು ಕಪ್ಪುಹತ್ತಿತೆಂದು ಕೂಗಿ ಕುಣಿದು ಒಬ್ಬರನ್ನೊಬ್ಬರು ಅಪ್ಪುವರೊ? ಇದುವರೆಗೆ ಪರಕೀಯಳೆಂದ ಹೆಂಗಸು ಇಂದು ಮನೆಯವಳೆಂದು ಗೊತ್ತಾದ ಮೇಲೆ ಪಾಪದ ಅನ್ನ ಕರಗುವಂತೆ ಹೊಟ್ಟೆಬಡೆದುಕೊಂಡು ನಗಲಿಕ್ಕಿಲ್ಲವೆ? .... ಏನೆಂದು ತಿಳುಹಿಸುವದು? ಊರ ಜನರೆಲ್ಲ ವ್ಯಭಿಚಾರಿಣಿ— (ಶೀನಣ್ಣನು ಹಣೆ ಬಡೆದುಕೊಳ್ಳುವನು. ನೋಡಿ) ಹಣೆಬರಹವನ್ನು ಅಳಿಸಬೇಕೆನ್ನುವಿರಾ? .... ತಿದ್ದಿ ಬರೆಯುಬೇಕೆನ್ನುವಿರಾ? ನಿಮ್ಮ ಮಗನ ಆಯುಷ್ಯಕ್ಕೆ ಇನ್ನೊಂದು ಬರೆ ಕೊಡಬೇಕೆನ್ನುವಿರಾ?

**ಶೀನಣ್ಣ:—** (ಕಣ್ಣೀರು ಸುರಿಸುತ್ತ) ವೆಂಕಾ, ವೆಂಕಾ, ರಾಮಣ್ಣನಿಗೆ ತಿಳುಹಿಸೊ! ಊರ ಜನರು ಹಾಳಾಗಲಿ—

**ವೆಂಕ:—** (ಗದ್ದರಿಸಿ) ಊರ ಜನರು ಹಾಳಾಗಲಿ ಎಂದು ಮೊದಲೇ

ನುಡಿದಿದ್ದರೆ ಇಂದು ನಿಮ್ಮ ಮಗನನ್ನು ಹಾಳುಮಾಡುವ ಪ್ರಸಂಗ ಬರುತ್ತಿತ್ತೆ?

**ಶೀನಣ್ಣ:**— (ಉದ್ವೇಗದಿಂದ) ಅಯ್ಯೋ! ಏನು ಮಾಡಲಿ? ಯಾರೂ ನನ್ನ— (ಒಮ್ಮೆಲೆ ತಡೆದು, ಉಕ್ಕಿಬರುವ ಕೋಪವನ್ನೂ ತಿರಸ್ಕಾರವನ್ನೂ ನುಂಗುತ್ತ) ಎಲ್ಲರೂ ನೀಚರು. ಧರ್ಮದ ಹೆಸರಿನಿಂದ ಅವರು ನೀಚರು.. ತತ್ವದ ಹುಚ್ಚನಾಗಿ ನೀನು ನೀಚ.... ಬೇಡ.. ನೀಚರ ಸಹಾಯ ಬೇಡ.. ಯಾರದೂ ಸಹಾಯ ಬೇಡ ನನಗೆ.. ಇದುವರೆಗೆ ಸುಖವನ್ನು ಬಿಟ್ಟು, ಶಾಂತಿಯನ್ನು ಬಿಟ್ಟು, ಸರ್ವಸ್ವವನ್ನು ಬಿಟ್ಟು ಉಳಿಸಿ ಬೆಳೆಸಿದ ನನ್ನ ಮಗನನ್ನು ನಾನೇ ಉಳಿಸುವೆ— ನಾನೇ ಉಳಿಸುವೆ— (ಒಳಗೆ ಹೊರಡುತ್ತ) ಗುರುಸಿದ್ಧಾ— ರಾಮಣ್ಣಾ— ಗುರುಸಿದ್ಧಾ—

**ವೆಂಕ:**— ನಿಮ್ಮ ಸುಖ-ಶಾಂತಿ-ಸರ್ವಸ್ವವಾದ ಜೀವವನ್ನು ಬಿಟ್ಟರೂ ನಿಮ್ಮ ಮಗನು ಉಳಿಯಲಿಕ್ಕಿಲ್ಲ— ಅದನ್ನೆ ಹೇಳಲಿಕ್ಕೆ—

**ಶೀನಣ್ಣ:**— (ತಿರುಗಿ ನಿಂತು ತಿರಸ್ಕಾರದಿಂದ) ಹೇಳುವ ಅಧಿಕಾರ ನಿನಗಿಲ್ಲ.. ಜೀವವನ್ನು ಕೊಟ್ಟು ಮಗನನ್ನು ಉಳಿಸುವ ಅನುಭವ— ಆ ಸ್ವರ್ಗೀಯ ಅನುಭವ ನಿನಗಿಲ್ಲ.

(**ಬಾಗಿಲನ್ನು ತೆಗೆದು ಒಳಗೆ ಹೋಗುವನು**)

**ವೆಂಕ:**— (ಅವನು ಹೋದುದನ್ನು ನೋಡುತ್ತ) ಸ್ವರ್ಗೀಯ ಅನುಭವ!.. ಅಯ್ಯೋ, ಹುಚ್ಚುತನ! ತಾಯ್ತಂದೆಯ ಜೀವದ ಗೊಬ್ಬರವಾಗಿ ಮಕ್ಕಳ ಜೀವ ಬೆಳೆಯುವದು ಭೂಮಿಯ ಅನುಭವ!

(ಗುರುಸಿದ್ಧನು ಲಾಂಬಗೆಯಿಂದ ಬಂದುದನ್ನು ನೋಡಿ ಕೈಚಲ್ಲಿ ಕಲ್ಲು ಹಾಸಿಗೆಯ ಮೇಲೆ ಕುಳಿತುಕೊಳ್ಳುವನು).

**ಗುರುಸಿದ್ಧ:**— ಬಂದಿನರಿ, ರಾಯರ, ಬಂದ್.... (ಅತ್ತಿತ್ತ ನೋಡಿ) ಎಲ!.... ರಾಯರು ನನ್ನ ಕರೆದರಲ್ಲ ಇಷೇ ಈಗ!.. (ವೆಂಕಾಚಾರಿಯು ಸುಮ್ಮನಿರಲು ತನ್ನಷ್ಟಕ್ಕೆ ನಕ್ಕು) ಮುಪ್ಪಿನಾಗ ಕಿವುಡ ಆಗೋದು ಹೋಗಿ ಎಲ್ಲಿಲ್ಲೀದೊ ಇಲ್ಲದ್ದೆಲ್ಲಾ ಕೇಳಿಸಿಧಾಂಗ ಆಗತದ.

**ವೆಂಕ** :— ( ಕೂಡಲು ಕೊಂಕದವನಂತೆ ) ರಾಯರು ಒದರಿದರು— ಆದರೆ ಅದು ನಿನಗಲ್ಲ.... ನನ್ನ ಮೇಲೆ ಸಿಟ್ಟಿನಿಂದ.

**ಗುರುಸಿದ್ಧ**:— ( ಆಶ್ಚರ್ಯ ತೋರಿಸಿ ) ನಿಮ್ಮ ಮ್ಯಾಲ !.... ಯಾರ ಮ್ಯಾಲ ಸಿಟ್ಟಿಗೆ ಬಂದರೂ "ಗುರುಸಿದ್ಧಾ" ಅಂತ ಒದರಲಿಕ್ಕೆ ನನ್ನ ಹೆಸರು ಬೈಗಳು ಅಂತೀರೊ ಏನು ?

**ವೆಂಕ**:— ( ಮೊದಲಿನಂತೆ ) ನಿನ್ನ ಹೆಸರು ದೇವರ ಹೆಸರು ಇದ್ದ ಹಾಗೆ. ಏನಾದರೊಂದ ಮೈಮೇಲೆ ಪ್ರಸಂಗ ಬಂದರೆ ನಿನ್ನ ಹೆಸರಿನಿಂದಲೆ ಕೂಗಿ ಕರೆಯುವದು— ಆ ಭಕ್ತವತ್ಸಲನ್ನ !

**ಗುರುಸಿದ್ಧ**:— ( ವೆಂಕಾಚಾರಿಯ ಮುಖಚರ್ಯೆಯನ್ನು ನಿರೀಕ್ಷಿಸಿ ) ಈ ಹೊತ್ತು ಎಲ್ಲಾರಿಗೂ ಏನ ಆಗೇತಿಯೊ ಏನೋ! ಒಬ್ಬರ ಮಾತು ಒಬ್ಬರಿಗ ತಿಳಿಯೋದಿಲ್ಲ— ಒಬ್ಬರೇನು ಮಾತಾಡಬೆಯ ಬಿಡೋಹಾಂಗಿಲ್ಲ.

**ವೆಂಕ**:— ಹುಚ್ಚು ಹಿಡಿದಿದೆ—

**ಗುರುಸಿದ್ಧ**:— ( ಆಶ್ಚರ್ಯದಿಂದ ) ಎಲ್ಲಾರಿಗೂ ?

**ವೆಂಕ** :— —ಅಲ್ಲೊ–ನಿನಗೆ–ಹಿಡಿದಿದೆ ಹುಚ್ಚು.

**ಗುರುಸಿದ್ಧ**:— ( ಅಣಕಿಸಿಂದ ) ಅಲ್ಲ ಮತ್ತ !.... ಈಗ ಕಾಲ ತಿರಗೇತಿ. ಈಗಿನ ದಿನದಾಗ ಮುದುಕರಿಗೆ ಹಿಡಿಯೋದಿಲ್ಲ ಹುಚ್ಚು— ಹುಡುಗರಿಗೆ ಹಿಡೀತೈತಿ.. ( ಮುಂದೆ ಬಂದು ) ಅಲ್ಲ— ಏನ ಸೇರಿಸೀರಿ ನಮ್ಮ ರಾಮಣ್ಣರಾಯರ ತಲೀವಳಗ?.. ಮನೀ ಅಂದ ಮಾತಿಗೆ, ಮನಸ್ಯಾ. ಅಂದ ಮಾತೀಗ ಸಾವೋದು ಕೆಡೋದು ಬಿಟ್ಟೇತ ?.... ಯಾರ ಕಯ್ಯಾಗಿನ ಮಾತು ಹುಟ್ಟೋದೂ ಸಾವೋದೂ ?.. ಮ್ಯಾಲ ಕುಂತಾನ ಶಿವ!.. "ಬಾರೊ ಮಂಗ, ನಿನ್ನದಿಷ್ಟ ನೋಡತೀನಿ ಜಗಿದಾಟ" ಅಂದನ— ಹುಟ್ಟಿ ಬರೋದು. "ಹೋಗೊ ಕಿಸಬಾಯಿ" ಅಂದನ— ಹಾಸಿಗೆ ಸುತ್ತಿಗೊಂಡು ಹೊರಡೋದು.. ದೇವರಾಟಪಾ, ಯಂಕಾಚಾರೀ, ಅದು ! ಅವನ್ನೆಲ್ಲ ಬಿಟ್ಟು ನಾ ಮಾಡೀನಿ ಅಂದರ.... ಇದೆಲ್ಲಾ ನಿಮ್ಮಂಥಾ ಹುಡುಗಾಟಕೆ ಮುಂದಿ ಜೋಡಿ.

**ವೆಂಕ:—** ಅಲ್ಲೊ– ನಮ್ಮ ಜೋಡಿಗಿಂತ ನಿನ್ನದು– ನಿಮ್ಮ ಶೀನಣ್ಣರಾಯರದು ಹೆಚ್ಚ ದಿವಸದ ಜೋಡಿ ಅಲ್ಲವೆ ರಾಮಣ್ಣರಾಯರಿಗೆ?

**ಗುರುಸಿದ್ಧ:—** (ತತ್ವಜ್ಞಾನಿಯಂತೆ) ಬುದ್ಧಿ ಬರೋತನಕ ನಮ್ಮ ಜೋಡಿ .... ಅದೇನ ಮಾತು? .... ಒಂದ ಯಿಚಾರಾ ಅಂದರ ಒಂದೇ ಯಿಚಾರೆ?.. ಹೊರಗಿನವರ ಸಂಗತಿ ಕಟ್ಟಿ ಮನೇಮುಂದಿಗೆಲ್ಲ ಬೈದಾಡೋದು! .. ನನಗ ಆಗೇ ಅನಿಸಿತ್ತು ತಲೆ ತಾಳೇದಮ್ಯಾಲ ಇಲ್ಲಾಂತ!.. ಇಂದು ಹೊರಬಿತ್ತು,—

**ವೆಂಕ:—** (ಆಶ್ಚರ್ಯ ತೋರಿಸಿ) ನೋಡಿದೆಯಿಲ್ಲೊ! .. ಇಷ್ಟು ದಿವಸ ಬೈದಾಡಿದ್ದಕ್ಕೆ ಇಂದು ಹೊರಬಿದ್ದಿತು ಮನೆಯಮಾತು!

**ಗುರುಸಿದ್ಧ:—** (ಬೇಜಾರಿನಿಂದ) ಮನೀಮಾತ ಅಲ್ಲೊ, ಯಪ್ಪ! ಇಂದ ಹೊರಬಿದ್ದದ್ದು ರಾಮಣ್ಣರಾಯರ ಹುಚ್ಚತನ .... (ಮೆಲ್ಲಗೆ) ಏನ ಮಾಡತಾನ ಗೊತ್ತೈತಿ ಏನು? ಮಾಳಿಗೆಮ್ಯಾಲ ನಿಂತಾನ— ನೆರೆದವರಿಗೆಲ್ಲ ಹೇಳತಾನ— "ನನ್ನ ತಂಗಿಯ ಕೂಸು ನಾ ಕೊಂದೆ, ನೀವೂ ನನ್ನ ಹಾಗೆ ಮಾಡಿರಿ" ಅಂತ.

**ವೆಂಕ:—** ಇದ್ದ ಮಾತು ಹೇಳಲಿಕ್ಕೆ ಯಾರ ಹೆದರಿಕೆ?

**ಗುರುಸಿದ್ಧ:—** (ಬೆಪ್ಪಾಗಿ) ಏನು?... ನಿಮ್ಮದೇ ಹುಚ್ಚ ಹಿಡಿದೈತಿ ಆಯ್ತು ಅವನಿಗೆ.... ಒಮ್ಮೊಮ್ಮೆ ಇದ್ದ ಮಾತು ಸಹಿತ ಹುಚ್ಚಹಿಡಿಯದೆ ಹೇಳೋದಾಗೋದಿಲ್ಲ.... ನನಗ್ಗೊತ್ತು ಈ ಹುಡುಗರಿಗ ಯಾಕ ಹುಚ್ಚ ಹಿಡೀತೇತಿ ಅಂತ.

**ವೆಂಕ:—**(ಮುಂದೆ ಬಂದು ಸಂಶಯದಿಂದ) ಏನು ನಿನಗೆ ಗೊತ್ತಿದಿಯೆ?

**ಗುರುಸಿದ್ಧ:—** (ಹೆಮ್ಮೆಯಿಂದ) ಎಲೇಲೆ! ಸುಮ್ಮಾಕ ಬೆಳ್ಳಗಾಗಿಲ್ಲ ಈ ಗುರುಸಿದ್ಧನ ಕೂದಲ.... ಉಂಡ ಆಕಳಿನ ಹಾಲಿನ ಹಾಂಗ ಉಂಡ ಮನಸ್ಯಾನ ಅನುಭೋಗ ಅದು, ಬಿಳಿ ಕೂದಲಾಂದ್ರ .... ನನಗೆಲ್ಲಾ ಗೊತ್ತು .... ಮುದುಕರ ಮಾತೂಂತ ನಗತೀರಿ .... ನಾ ಆಗೆ ಹೇಳ್ದೆ

ರಾಯರಿಗೆ "ಅಣ್ಣಾ ಅವರ, ಇನ್ನ ಹಾದೀ ನೋಡೋದು ತರ ಅಲ್ಲ .. ಅವರನ್ನವರಿಗೆ ಒಪ್ಪಿಸಿಬಿಡಿರಿ" ಅಂತ.

**ವೆಂಕ:—** (ಹೆಚ್ಚಾದ ಸಂಶಯದಿಂದ) ಏನೊ— ಏನು ಹೇಳುವೆ?

**ಗುರುಸಿದ್ಧ:—** ಅಬ್ಬ! ನಾನೂ ಈ ಆಟ ಮಾಡಿದಾವ ಇದ್ದೀನಿ.... ಯಾಳೇಕ್ಕ ಮಾತಾಡಿಸಲಿಕ್ಕೆ ಮನ್ಯಾಗ ಹೆಂಡತಿ ಇದ್ದಿದ್ದಿಲ್ಲಾಂದ್ರೆ— (ವೆಂಕಾಚಾರಿಯು ತಿರಸ್ಕಾರದಿಂದ ಸರಿಯುವದನ್ನು ನೋಡಿ) ಮೂಗ ಏರಿಸಬ್ಯಾಡ, ಯೆಂಕಾಚಾರಿ. ಭಲೆಭಲೆ ಮಂದಿ ಮೊದಲ ಮೂಗ ಏರಿಸಿ ಆ ಮ್ಯಾಲ ನೆಲಕ್ಕ ಹೊಸಿದಾರ ಅದೇ ಮೂಗ!.. ಅದಕ್ಕೇ ಹೇಳಿದೆ ರಾಯರಿಗೆ .. "ಮನ್ಯಾಗೇ ಹೆಂಡತಿ—" (ಒಮ್ಮೆಲೆ ತಡೆಯುವನು).

**ವೆಂಕ:—** (ಮುಂದೆ ಬಂದು) ಏನು— ಏನಂದೆ?

**ಗುರುಸಿದ್ಧ:—** (ಗಾಬರಿಗೊಂಡು) ಏನಿಲ್ಲ— ಮತ್ತೇನು? ಮಗಸಿಗೆ ಒಂದು ಹೆಂಡತಿ ಗಂಟುಹಾಕಿರಿ ಅಂತ—

**ವೆಂಕ:—** (ಅವನನ್ನು ನಿಷ್ಠುರವಾಗಿ ದಿಟ್ಟಿಸುತ್ತ) ಹುಂ.. "ಒಮ್ಮೊಮ್ಮೆ ಇದ್ದ ಮಾತು ಕೂಡ ಹುಚ್ಚುಹಿಡಿಯದೆ ಹೇಳೋದಾಗೋದಿಲ್ಲ" ಅಂದೆಯಲ್ಲವೆ ನೀನು? ನಿನಗೆ ಹುಚ್ಚು ಹಿಡಿದಿದೆ ಎಂದು ಮೊದಲೇ ಹೇಳಿದೆ.. ಹುಚ್ಚನಂತೆ—ಹಂ—ಏನು? ರಾಮಣ್ಣರಾಯರ ಹೆಂಡತಿ ಕೃಷ್ಣಾತಾಯಿ—

**ಗುರುಸಿದ್ಧ:—** (ಗಾಬರಿಗೊಂಡು ಅತ್ತಿತ್ತ ನೋಡಿ) ಅಲ್ಲೊ, ಯಪಾ! (ವೆಂಕಾಚಾರಿಯು ಮಾತನಾಡಲು ಹವಣಿಸಲು) ಹೌದೊ, ಯಪ!, ಒದರಬ್ಯಾಡ.... ಎಲೆ ಶಿವನ! ಎಂಥಾ ಹರೇಮಿ ಹುಡುಗರು!

**ವೆಂಕ:—** (ಗದ್ದರಿಸಿ) ಏನು?

**ಗುರುಸಿದ್ಧ:—** (ನಮ್ರನಾಗಿ) ಏನೂ ಇಲ್ಲ.. ನಿನ್ನ ಜೋಡಿ ಮಾತಾಡಿದ ತಪ್ಪಿಗೆ- ಇಕ!- ಕೈಮುಗೀತೀನಿ- ಯಾರ ಮುಂದೆ ಹೇಳಬ್ಯಾಡ ..

**ವೆಂಕ:**— ( ಅಣಕಿಸಿಂದ ) ಯಾಕೆ ? ನಿನಗೆ ಯಾಕೆ ಇಷ್ಟು ನಾ ಏನು ಹೇಸಿಕೆಯೊ ?

**ಗುರುಸಿದ್ಧ:**— ( ಗಂಭೀರನಾಗಿ ) ಇಲ್ಲಿ ನೋಡು, ಯೆಂಕಾಚಾ ಇಲ್ಲದ್ದ ಮಾತಾಡಿ ನನ್ನ ಕೆಣಕಬ್ಯಾಡ.... ಹೌದು, ಕೃಷ್ಣಾತಾಯಿ ರಾಮಣ್ಣರಾಯರ ಹೆಂಡತಿ.... ಎಲ! ಕೇಳಿಕೊ ನನ್ನ ಮಾತು .... ಮುಚ್ಚಿಟ್ಟರು ಅಂತ ಕೇಳಿದೀ ಅಂದರೆ— ನಮಗೂ ನಿಮಗೂ ಮಾಡೋದ್ಯೆತಿ ಅಂತೀನಿ ನಾ, ಹೌದಲ್ಲೊ ?

**ವೆಂಕ:**— ರಾಮಣ್ಣರಾಯರೆ ಕೇಳಿದರು ಅಂದರೆ —

**ಗುರುಸಿದ್ಧ:**— ಶೀನಣ್ಣರಾಯರು ಇದ್ದಾರಲ್ಲ ಹೇಳಲಿಕ್ಕೆ; ನ ನಿಮಗೂ ಯಾಕ ? ಅಂತೀನಿ.

**ವೆಂಕ:**— ( ನಿರುತ್ತರನಾಗಿ ) ಅಲ್ಲೊ —

**ಗುರುಸಿದ್ಧ:**— ( ತಿರುಗಿ ನೋಡಿ ) ಶ್ ಶ್ .... ( ಮೆ ಹೌದಂತೀಯೊ ಅಲ್ಲೊ ?.... ನಾ ಹೇಳ್ತೀನೀ ಅಂತ— ( ಕೆಲಸವಿದ್ದ ಹೊರಬಾಗಿಲಿನಿಂದ ಹೋಗುವನು ).

( ಕಣ್ಣು ಕೆಂಪೇರಿದ ಕೃಷ್ಣಾತಾಯಿಯೂ ಅವಳ ಹಿಂದಿನಿಂದ ಅವಳ ಸ ಧಾನಮಾಡಲು ಯತ್ನಿಸುವ ಗೋಪಾಲಾಚಾರ್ಯನೂ ಬರುವರು. )

**ಕೃಷ್ಣತಾಯಿ:**— ( ಒಮ್ಮೆಲೆ ನಿಂತು, ಉದ್ದವಾಗಿ ಉಸಿರೆ ಉದ್ವೇಗದಿಂದ ) ಅಮ್ಮಯ್ಯ ! ಎಂತಹ ಮಾತು ? ಏನೇನು ಕೇಳಿದೆನ ದೇವರೆ, ಇದನ್ನೆ ಕೇಳುವದಕ್ಕೆ ನನ್ನ ಉಳಿಸಿದೆಯಾ ? ಇದನ್ನೆಲ್ಲ ತಾ ದಕ್ಕೆ ನನ್ನ ಬೆಳೆಸಿದೆಯಾ ?

**ಗೋಪಾ** ( ಹಿರಿತನದ ಪ್ರಸಾದಯುಕ್ತವಾಣಿಯಿಂದ ) ಹಾಗಲ್ಲ, ಕೃ ತಾಯೀ, ಯಾಕೆಂತೆಂದರೆ, ನೋಡಿರಿ, ವಿಚಾರಮಾಡಿರಿ, ಯಾಕೆಂತೆಂದ

ಕೃಷ್ಣಾತಾಯಿ:— (ಅರ್ಧ ತನ್ನಷ್ಟಕ್ಕೆ) ಯಾರಿಗೆ- ಯಾರಿಗೆ ಸೇರಿದೆ ಭ್ರಮ ?.... ಅವರಿಗಲ್ಲ-ನನಗೆ.. ನನ್ನ ತಲೆಯೊಳಗೆ ಸೇರಿದೆ ಭ್ರಮ.. ಇಲ್ಲವಾದರೆ— ಅಮ್ಮಯ್ಯ! ಎಷ್ಟು ಆಶೆ ಕಟ್ಟಿಕೊಂಡಿದ್ದೆನಲ್ಲ!.... ಅಹುದು .. ನನಗೆ ಭ್ರಮ ಅಂದಿನಿಂದಲೆ ಸೇರಿದೆ.... ಇಲ್ಲವಾದರೆ ಮುಂದಿಗೆ ಹೆದರಿ ಮುಖಮುಚ್ಚಿಕೊಂಡು ಕೂಡುತ್ತಿದ್ದೆನೆ?.... ಅಲ್ಲ. ಭ್ರಮ ಸೇರಲು ಅಂದು ನನಗೆ ತಲೆಯೇ ಇರಲಿಲ್ಲ.... ಅಮ್ಮಯ್ಯಾ! ತಪ್ಪು ಯಾರದು?.. (ಗೋಪಾಲಾಚಾರ್ಯನನ್ನು ನೋಡುತ್ತ) ನನ್ನದು.. ಹೆದರುವ ಹೆಂಗಸಿನದು .... ಮುಂದಿಗಾಗಿ—ನಿಮಗಾಗಿ— (ತ್ವೇಷದಿಂದ) ಅವರ ತಲೆಯೊಳಗ ಭ್ರಮ ಸೇರಿಸಿದಂಥಾ ನಿಮಗಾಗಿ—

ಗೋಪಾ:— (ನಡುವೆಯೆ) ಛೆ-ಛೆ. ಇದೇನು, ಕೃಷ್ಣಾತಾಯೀ? ಇಂತಹಾ ನೀಚ ಕೆಲಸ— ಯಾಕೆಂತೆಂದರೆ— ನನ್ನ ಸ್ವಭಾವ ಗೊತ್ತಿಲ್ಲವೆ? ಹೀಗೆ ಹರಟಿ ಕೊಚ್ಚುವೆನೆ ನಾನು? ನೋಡುವಿರಲ್ಲ, ಯಾಕೆಂತೆಂದರೆ — ರಾಯರಾಯ್ತು, ರಾಯರ ವ್ಯಾಖ್ಯಾನಾಯ್ತು; ಇಲ್ಲವೆ ನನ್ನ ಪೂಜೆ, ನನ್ನ ಪುರಾಣ. ಯಾಕೆಂತೆಂದರೆ ವೇಳೆ ಕೂಡಾ ಸಿಕ್ಕೋದಿಲ್ಲ ನನಗೆ ಇಂತಹ ಹರಟಿ ಕೊಚ್ಚಲಿಕ್ಕೆ!

ಕೃಷ್ಣಾತಾಯಿ:— (ದುಃಖತಡೆದು, ಉಸಿರೆಳೆದು) ನೀವಿಲ್ಲದಿದ್ದರೆ ನಿಮ್ಮಂಥವರು—

ಗೋಪಾ:— ನನ್ನಂಥವರು! ಹಾಂ-ಒಪ್ಪಬಹುದು ಒಂದು ವೇಳೆ .. ಯಾಕೆಂತೆಂದರೆ.. ಇದೆ, ಅಂತಹ ಜನ ಇದೆ.... ತೋರಿಕೆಗೆ ನನ್ನ ಹಾಗೆ—

ಕೃಷ್ಣಾತಾಯಿ:— (ಅಸಹ್ಯದಿಂದ) ಸಾಕು ಮಾಡಿರಿ ನಿಮ್ಮ ತೋರಿಕೆ!.... ನಿಮ್ಮ ಪೂಜೆ! ನಿಮ್ಮ ಪುರಾಣ! ದೇವನ ಪೂಜೆ ಮಾಡುವವರೆ ಮನುಷ್ಯನ ನಿಂದೆ ಮಾಡುವವರು.... ನೀವೆಲ್ಲಾ ಕೂಡಿ- ಅಯ್ಯೊ— ಅವರ ತಲೆಯೊಳಗೆ [ಎಂದು ಮುಖತಿರುವಿ ಬಿಕ್ಕುವಾಗ ಅಚಲನಾಗಿ ನಿಂತ ವೆಂಕಾಚಾರಿಯನ್ನು ನೋಡಿ ಒಮ್ಮೆಲೆ ತಡೆಯುವಳು. ಗೋಪಾಲಾಚಾರ್ಯನ ಲಕ್ಷ್ಯವೂ ಮುಗನ ಕಡೆಗೆ ಹರಿಯುವದು. ತತ್‌ಕ್ಷಣವೆ ಏನೊ ಸ್ಮರಣೆಗೆ ಬಂದವನಂತೆ]

ಗೋಪಾ:— ಹಾಂ.. ಏ, ವೆಂಕಾ, ಬಾ ಇಲ್ಲಿ.. ಬಾರೊ, ಯಾಕೆಂತೆಂದರೆ— ಕೃಷ್ಣಾತಾಯಿಯ ಕ್ಷಮೆ ಬೇಡು.

ವೆಂಕ:— ( ಏನೂ ಅರಿಯದವನಂತೆ ) ಏನು ?

ಗೋಪಾ:— ( ಸಿಟ್ಟಿನಿಂದ ) ಏನು ಅಂತೆ ! ಯಾಕೆಂತೆಂದರೆ— ಕೇಳಿಸದಿದ್ದರೆ ದೂರ ಯಾಕೆ ನಿಲ್ಲುವೆ ? ( ವೆಂಕಾಚಾರಿಯು ಕದಲದಿರಲು ತಾನೇ ಅವನ ಹತ್ತಿರ ಬಂದು–ಮೆಲು–ದನಿಯಲ್ಲಿ ) ಮೂರ್ಖಾ, ಅವರ ಕ್ಷಮೆ ಬೇಡು.. ಯಾಕೆಂತೆಂದರೆ— ಇನ್ನು ಅವರು ಮನೆಯ ಯಜಮಾನತಿ—

ವೆಂಕ:— ( ಗಟ್ಟಿಯಾಗಿ ) ನಾನು ಯಾಕೆ ಕ್ಷಮೆ ಬೇಡುವುದು ?

ಗೋಪಾ:— ( ಸಿಟ್ಟುಬಂದರೂ ಮೆಲುದನಿಯಲ್ಲಿ ಹಲ್ಲುಕಟಿಯುತ್ತ ) ಅವಲಕ್ಷಣಾ, ನನ್ನ ವೃತ್ತಿಗೆ ನೀನು ಯಜಮಾನ. ( ಕೃಷ್ಣಾತಾಯಿಯು ಮುಖವೆತ್ತಿ ನೋಡುವದನ್ನು ಕಂಡು ಗಟ್ಟಿಯಾಗಿ ) ಯಾಕೆಂತೆಂದರೆ— ನಿನ್ನ ಮೇಲೆ ವಿಶ್ವಾಸ ಕೃಷ್ಣಾತಾಯಿಯವರದು.

ಕೃಷ್ಣಾತಾಯಿ:— ( ನಿರಾಶೆಯಿಂದ ) ವಿಶ್ವಾಸ !.... ಯಾರ ಮೇಲೆ ?.. ಕಟುಕರು, ಎಲ್ಲರೂ ಹೆಂಗಸರಿಗೆ ಕಟುಕರು—

ವೆಂಕ:— ( ತಿರಸ್ಕಾರದಿಂದ ತಂದೆಯನ್ನು ನೋಡುತ್ತ ) ಮದಿವೆ ಎಂದು ಶಾಸ್ತ್ರಸಮ್ಮತವಾಗಿ ಹೆಂಗಸರನ್ನು ಕೊಲ್ಲುವವರು—

ಗೋಪಾ:— ( ಮಗನನ್ನು ಬೆದರಿಸುತ್ತ ) ಹಾಂ–ಹಾಂ– ( ಕೃಷ್ಣಾತಾಯಿಗೆ ) ನೋಡಿದಿರಿಲ್ಲೊ ! ಕೃಷ್ಣಾತಾಯೀ, ಯಾಕೆಂತೆಂದರೆ ( ಮಗನನ್ನು ಸಿಟ್ಟಿನಿಂದ ನೋಡುತ್ತ ) ನನ್ನ ಹೆಂಡತಿಯನ್ನು ನಾನು ಕೊಂದೆನಂತೆ ! ಹೀಗೆಯೆ ಎಲ್ಲಾ ಜನ — ಯಾಕೆಂತೆಂದರೆ— ಮಾತಾಡಲಿಕ್ಕೆ ಏನೂ ವಿಷಯ ಇದ್ದಿದ್ದಿಲ್ಲಾಂದರೆ— ಸಾಕು— ಮಂದಿಯ ಮಾತು ಆಡುವರು.. ಬೆಳೆಯುವದು ಮಾತಿಗೆ ಮಾತು.... ಯಾಕೆಂತೆಂದರೆ— ಒಬ್ಬರಿಂದ ಒಬ್ಬರಿಗೆ—

ಕೃಷ್ಣಾತಾಯಿ:— (ಅವನ್ನ ಕಡೆ ನೋಡದೆಯೆ) ಆ ಒಬ್ಬರಲ್ಲಿ ನೀವೂ—

ಗೋಪಾ:— (ಅವಳಿಗೆ ಸಮಾಧಾನ ಕೊಡುವ ಹಂಚಿಕೆಯಿಂದ) ಆಗಲಿ..... ಯಾಕೆಂತೆಂದರೆ— ನಾನೂ ಅಂಥವ ಅಂತ ನಿಮ್ಮ ಹಟಾ ಇದ್ದರೆ— ಒಪ್ಪಿಕೋತೀನಿ— ಯಾಕೆಂತೆಂದರೆ— ಶೀನಣ್ಣರಾಯರ ಸೊಸೆಯು ಸಮಾಧಾನಕ್ಕಾಗಿ— ಇದೊ— ಯಾಕೆಂತೆಂದರೆ ನನ್ನ ಮಗನ ಪತಿಯಿಂದಲೂ ಕ್ಷಮಾ ಬೇಡುವೆ, ಆಯಿತೆ?

ಕೃಷ್ಣಾ:— (ಮೇಲಿನಂತೆ) ಆಯಿತು!.... ಆದದ್ದೇನು?.. ನಿಮ್ಮ ಮನಸ್ಸಿನ ಸಮಾಧಾನ.

ವೆಂಕ:— (ನೊಂದುಕೊಂಡು) ಕೃಷ್ಣಾತಾಯೀ, ನನಗೂ ಎಲ್ಲ ಗೊತ್ತಿದೆ. ನನಗಾದರೂ ಪೂರ್ತಿಯಾಗಿ ವಿಶ್ವಾಸವಿದೆ—

ಗೋಪಾ:— (ನಡುವೆಯೆ) ಹಂ— ಅದೇ, ಅದೇ, ನಾನೂ ಅದನ್ನೆ ಹೇಳತೀನಿ.. ಯಾಕೆಂತೆಂದರೆ ಅಮ್ಮನವರ ಚಾರಿತ್ರಕ್ಕೆ ಒಂದಿಷ್ಟಾದರೂ ಭಂಗ—

ಕೃಷ್ಣಾ:— (ಒಮ್ಮೆಲೆ ಕೆರಳಿ ಅವನನ್ನು ದಿಟ್ಟಿಸಿ) ಅಯ್ಯೋ— ಮುಚ್ಚಿರಿ ನಿಮ್ಮ ಬಾಯಿ ಅಂದರೆ! ತಡೆಯುದ ಅನ್ನದಂತೆ ತಿಳಿಯುವ ವಿಚಾರವಾದಿ ವಚನವಾಗದೆ ಹೊಲಸಾದ ನಾಲಗೆಯಿಂದ ಯಾಕೆ ಮಾತನಾಡುವಿರಿ? ಚಾರಿತ್ರ್ಯ....? ಯಾರು ಕೇಳಿದರು ನಿಮಗೀಗ ಈ ಚಾರಿತ್ರ್ಯದ ಪುರಾಣ-ಪುಣ್ಯಕಥೆ? ನನಗೆ ಓದಲು ಬರುವದು.. ತಿಳಿಯಿತೆ?.. ಮನೆಯ ಮೂಲೆಯಲ್ಲಿ ಕಸಪೊರಕೆಯಂತೆ ಬಿದ್ದುಕೊಂಡ ಹೇಡಿ ಹೆಂಗಸಿಗೆ ಹೇಳಿರಿ ನಿಮ್ಮ ಚಾರಿತ್ರ್ಯದ ಪುರಾಣ.. ಮುಂದಿನ ಬಾಗಿಲು ಮುಚ್ಚಿಕೊಂಡು ಹಿಂದಿನ ಕಿಟಕಿಯಿಂದ ಕಾಲೆತ್ತಿ ಹಣಿಕಿಕ್ಕುವ ಹೆಂಗಸಿಗೆ ಹೇಳಿರಿ ನಿಮ್ಮ ಚಾರಿತ್ರ್ಯದ ಪುರಾಣ.... ಮನೆಯಲ್ಲಿ ಬಾಯಾರಿ ಬಾವಿಯ ನೀರಿನಲ್ಲಿ ಮುಳುಗುವ ಹೆಂಗಸಿಗೆ— — ಕಣ್ಣೀರು ತುಂಬಲು ಮುಖಮುಚ್ಚಿಕೊಳ್ಳುವಳು).

ಗೋಪಾ:— (ಗಾಬರಿಗೊಂಡು) ನಾ—ನಾ—ನೇನೂ ಅಂದಿಲ್ಲ ಕೃಷ್ಣಾತಾಯೀ— ಯಾಕೆಂತೆಂದರೆ—

ಕೃಷ್ಣಾ:— (ಉದ್ವೇಗದ ಕನಿಕರದಿಂದ) ನಿಮ್ಮಂತಹರು ಎಷ್ಟೊಂದು ಅಂದರೂ, ಆಡಿಕೊಂಡರೂ ಕಳೆದುಹೋಗಲು ಚಾರಿತ್ರ್ಯವು ಹೆಂಗಸಿಗೆ

ಬರಿಯ ತಲೆಯ ಮೇಲಿನ ಸೆರಗು ಅಲ್ಲ... ಆದರೆ.... ಆದರೆ.... ಯಾವು-ದನ್ನು ನೋಡಿ ನಾನು ಎಲ್ಲವನ್ನು ನುಂಗಿಕೊಂಡೆ, ಯಾರಿಗಾಗಿ ಅಭಿಮಾನ ತಾಳಿ, ನನ್ನ ಹೆಂಗಸುತನದ ಹಂದರ ನಿಲ್ಲಿಸಿ, ನನ್ನ ಇಚ್ಛೆಯ ತೋರಣ ತೂಗಿಸಿ, ನನ್ನ ಶಕ್ತಿಯ ಮಂಟಪ ಹೂಡಿದೆ— ಅವರನ್ನು— ಅವರ ಮನಸ್ಸನ್ನು— ಆದೇ ಮಂಟಪದ ಅಗ್ನಿಯಲ್ಲಿ ಆಹುತಿ ಮಾಡಿದಿರಲ್ಲ! ದುಡಿಯಲಾರದ ನಿಮ್ಮ ಧರ್ಮಕ್ಕೆ, ಹೊತ್ತುಕಳೆಯುವ ನಿಮ್ಮ ಪುರಾಣಕ್ಕೆ ಆಹುತಿ ಮಾಡಿದಿರಲ್ಲ! ( ಮುಂದೆ ನೋಡುತ್ತ ) ಅದೊ.... ನನ್ನ ಮಗು....

**ಗೋಪಾ**:— ( ಮುಂದೆ ನೋಡಿ ಹೆದರಿ ) ಎಲೆಲ! ಇದೇನು ವಿಚಾರಾ ಅಂದೆ! ಯಾಕೆಂತೆಂದರೆ—

**ಕೃಷ್ಣಾ**:— ( ಮುಂದೆ ತೋರಿಸುತ್ತ ) ಅವರೇ— ಅವರೇ ನನಗೀಗ ಮಗುವಿನಂತೆ. ಹೆಂಡತಿಗೆ ಗಂಡ, ಹೆಂಗಸಿಗೆ ಮಗು.... ಅವರಲ್ಲಿ ಅಭಿಮಾನ ಹುಟ್ಟಲಿ, ನನ್ನಿಂದ ಅವರಲ್ಲಿ ಸಾಹಸ ಬರಲಿ, ನನ್ನಿಂದ ಅವರು ಏನೇನೊ ಆಗಲಿ— ಎಂದು ನಂಬಿದ್ದೆನಲ್ಲ! ( ಎಂಪು ಒಂದೇಸವನೆ ಎದುರು ನೋಡುತ್ತ ನಿಲ್ಲುವಳು ).

**ವೆಂಕ** :— ( ಅಭಿಮಾನದಿಂದ ) ಕೃಷ್ಣಾತಾಯೀ, ನೀವು ನನ್ನ ಗುರುಪತ್ನಿ. ಇಂದು ನಿಮಗೆ— ನಮ್ಮೆಲ್ಲರಿಗೆ— ಅಭಿಮಾನ ತರುವಂತಹ ಪ್ರಸಂಗ ಎಂದು ಹೇಳಲು ಬಂದಿರುವೆ. ತತ್ವಕ್ಕಾಗಿ, ಸತ್ಯಕ್ಕಾಗಿ ತಮ್ಮ ಜೀವ ಕೊಡಲು—

**ಕೃಷ್ಣಾ**:—( ಎದುರು ನೋಡುತ್ತಲೆ ) ತತ್ವಕ್ಕಾಗಿ ಅಲ್ಲ, ವೆಂಕಾಚಾರೀ, ಅದು ನೋಡು ; ಕೊಡಬೇಕೆಂದರೂ ಜೀವ ಉಳಿದಿದೆಯೇನು ನೋಡು— ಮುಂದಿಯ ತತ್ವಕ್ಕೆ ಮೊದಲೇ ಆಹುತಿಯಾಗಿದೆ ಈ ಜೀವ.

( ಶೀನಣ್ಣನು ಮಗನನ್ನು ಕೈಕೊಟ್ಟು ಕರೆದುಕೊಂಡು ಬರುವನು. ರಾಮಣ್ಣನ ವೇಷವೂ ಮುಖದ ಕಳೆಯೂ ಈ ಮೊದಲೇ ಇದೇ ಅಂಕದಲ್ಲಿ ಬೇರೆ ಬೇರೆ ಜನರು ಬಣ್ಣಿಸಿದಂತೆ. ತಂದೆ-ಮಗ ಇಬ್ಬರನ್ನೂ ನೋಡಿ ಎಲ್ಲರೂ ಮಾತು ತಡೆಯುವರು. ಶೀನಣ್ಣನು ಮಾತನಾಡದೆ ಮಗನೊಡನೆ ಕಲ್ಲುಹಾಸುಗೆಯ ವರೆಗೆ ನಡೆದು ಅವನನ್ನು ಅಲ್ಲಿ ಕೂಡ್ರಿಸುವನು. ಆಚಾರ್ಯನೂ ಅವನ ಮಗನೂ ಪ್ರೇಕ್ಷಕರ ಎಡಬದಿಯ,

ಕೃಷ್ಣಾತಾಯಿಯು ಬಲಬದಿಯ. ರಂಗ ಭೂಮಿಭಾಗದಲ್ಲಿ ನಿಲ್ಲುವರು. ರಾಮಣ್ಣನು ಕೃಷ್ಣಾತಾಯಿಯನ್ನು ದಿಟ್ಟಿಸುವನು. ಅವಳು ತಡೆಯದೆ ಮೆಲ್ಲಗೆ ಒಳಗೆ ಹೊರಡುವಳು. ಕೂಡಲೆ ಶೀನಣ್ಣನು "ಕೃಷ್ಣಾತಾಯೀ, ತಡೆ" ಎನ್ನಲು ಅವಳು ನಿಂತುಬಿಡುವಳು. ಮುಂದೆ ಏನು ಮಾತನಾಡಬೇಕೆಂಬುದು ತಿಳಿಯದೆ ಶೀನಣ್ಣನು ಬೆಪ್ಪಾಗಿ ನಿಲ್ಲುವನು. ಅದೇಕೆ ? ಏನು ಮಾತನಾಡಬೇಕೆಂಬುದು ಯಾರಿಗೂ ತಿಳಿಯದು. ರಾಮಣ್ಣನು ಮಾತ್ರ ಒಂದೇಸವನೆ ಗೋಪಾಲಾಚಾರ್ಯನನ್ನು ದಿಟ್ಟಿಸುವನು. ಆಚಾರ್ಯನಿಗೆ ಆಶ್ಚರ್ಯ ಉಂಟಾಗಿ, ಒಂದೆರಡು ಸಲ ಕೆಮ್ಮಿ, ಮುಂದೆ ಬಂದು ಸಮಾಧಾನದ ಮೆಲುದನಿಯಲ್ಲಿ— )

**ಗೋಪಾಲಾಚಾರ್ಯ :—** ಅಂ.. ರಾಮಣ್ಣಾ, ನಾನು ಯಾರು ಗುರುತು ಹತ್ತಿತೇನ ? ಯಾಕೆಂತೆಂದರೆ, ಗೋಪಾಲಾಚಾರ್ಯ ನಾ— ( ರಾಮಣ್ಣನು ತಿರಸ್ಕಾರದಿಂದ ನಗೆ ಸೂಚಿಸಲು ತಡೆಯುವನು ).

**ವೆಂಕ:—** ( ಅಭಿಮಾನದಿಂದ ಮುಂದೆ ಬಂದು ) ರಾಮಣ್ಣರಾಯರೆ, ತಿಳಿಯದೆ ಆಡಿದ ಮಾತುಗಳಿಗಾಗಿ ತಲೆ ತಗ್ಗಿಸುವೆ. ಈ ಹೊತ್ತು— ( ರಾಮಣ್ಣನು ಗೋಪಾಲಾಚಾರ್ಯನನ್ನೆ ನೋಡುತ್ತಿರಲು ತನ್ನ ಮಾತಿನ ಕಡೆಗೆ ಅವನ ಲಕ್ಷ್ಯವಿಲ್ಲೆಂದು ವೆಂಕಾಚಾರಿಯು ತಡೆಯುವನು ).

**ರಾಮಣ್ಣ:—** ( ಒಂದೊಂದೆ ಶಬ್ದವನ್ನು ಆಯಾಸದಿಂದ ತನ್ನಷ್ಟಕ್ಕೆ ನುಡಿಯುವವನಂತೆ ) ಗುರುತು ಹತ್ತಿತೆ ?.... ಏನಾಗಿದೆ.... ( ಒಮ್ಮೆಲೆ ಆವೇಶದಿಂದ ) ಏನೂ ಇಲ್ಲ.. ಎಲ್ಲರ ಗುರುತು ಇದೆ ನನಗೆ.... ಇದೊ ಮನುಷ್ಯಧರ್ಮವನ್ನು ಬಿಟ್ಟುಕೊಟ್ಟು ಮಂದಿಯ ಮಗಳ ಆಹುತಿ ನುಂಗಿದ ಗೋಪಾಲಾಚಾರ್ಯ ಈತ.... ಮನುಷ್ಯಧರ್ಮಕ್ಕೆ ಹೆದರಿ ಮನೆಯ ಮಗಳ ಆಹುತಿ ಮಾಡಿದ ನನ್ನ ತಂದೆ.. ( ಶೀನಣ್ಣನು ಏನನ್ನೊ ನುಡಿಯ-ಬೇಕೆನ್ನಲು ) ತಡೆಯಿರಿ.... ಮನಸಿನ ಧರ್ಮಕ್ಕೆ ಆಹುತಿಯಾದ ಈತ ವೆಂಕಾಚಾರಿ.... ಇದೊ.... ದೈತ್ಯರನ್ನು ಮೋಸಗೊಳಿಸಲು ಮೋಹಿನಿ ರೂಪ ತಾಳಿದನಂತೆ ದೇವ— ಆದೇ ನಿಮ್ಮ ದೇವನು ಮನುಷ್ಯರೆಲ್ಲ ದೈತ್ಯರೆಂದು ತೋರಿಸಲು ಹಿಂದುಸಮಾಜದಲ್ಲಿ ಹೆಂಗಸು ಆಗಿ ಹುಟ್ಟಿ ನಿಂತಿರುವ.. ನೋಡಿರಿ ಇವಳನ್ನು.... ಒಬ್ಬ ದೈತ್ಯನ ಹೆಂಡತಿಯನ್ನು—

**ವೆಂಕ:—** ( ಕಳಕಳಿಯಿಂದ ) ಇಲ್ಲ, ರಾಮಣ್ಣರಾಯರೆ, ತಪ್ಪಾಯಿ-

ತೆಂದು ಹೇಳಲು ಬಂದಿರುವೆ. ಇಂದು ತರುಣರೆಲ್ಲ ಕೂಡಿ ತಪ್ಪನ್ನು ಒಪ್ಪಿ ನಿಮ್ಮ ಅಭಿನಂದನೆ ಮಾಡಲು ಸಭೆ ಸೇರಿಸಿದ್ದಾರೆ.

**ಶೀನಣ್ಣ**:— ( ಬೇಜಾರವಾಗಿ ) ವೆಂಕಾ, ಸಭೆ ಬೇಡ— ಸಮಾಜ ಬೇಡ.. ನಾಳಿನ ದಿವಸ ಈ ಊರನ್ನೆ ಬಿಟ್ಟುಕೊಡುವ ಯೋಚನೆ ಇದೆ ನಮಗೆ.

**ಗೋಪಾಲಾಚಾರ್ಯ** :— ( ನಗುವ ಯತ್ನದಿಂದ ) ಹೊಸ ಸಂಸಾರಕ್ಕೆ, ಯಾಕೆಂತೆಂದರೆ, ಹೊಸ ಜಾಗೆ ಬೇಕೇ ಬೇಕು.

**ವೆಂಕ** :— ( ಶೀನಣ್ಣನಿಗೆ ) ಊರು ಬಿಟ್ಟುಕೊಡುವದೆ ?.... ಹಂ.. ಅದು ಹೇಗೆ ? ನನಗೆ ತಿಳಿಯುದಂತಾಗಿದೆ— ರಾಯರೆ.

**ಶೀನಣ್ಣ**:— ( ಮೋಲಿನಂತೆಯೆ ) ಯಾರಿಗೂ ತಿಳಿಯೋದು ಬೇಡ. ರಾಮಣ್ಣ, ರಾಮಣ್ಣನ ಹೆಂಡತಿ ಸುಖವಾಗಿ—

**ರಾಮಣ್ಣ**:— ( ನಡುವೆಯೆ ) ತಡೆಯಿರಿ.. ಕೃಷ್ಣಾತಾಯೀ, ನಿಮ್ಮ ಮೇಲೆ ಸಿಟ್ಟಾದುದಕ್ಕೆ—

**ಗೋಪಾಲಾಚಾರ್ಯ**:— ರಾಯರೆ, ಉತ್ಸವದ ಯಥಾಸಾಂಗ ವ್ಯವಸ್ಥೆ ಮಾಡೋಣ. ಯಾಕೆಂತೆಂದರೆ—ನಡಿಯೋ, ವೆಂಕಾ, ಒಳಗೆಯೆ ಹೋಗೋಣ ( ಹೊರಡುವರು ).

**ರಾಮಣ್ಣ** :— ತಡೆಯಿರಿ—(ಎಲ್ಲರೂ ತಡೆಯುವರು) ಕೃಷ್ಣಾತಾಯೀ, ಹಿಂದೆ ಎಂದೋ ದೇವರ ಸಾಕ್ಷ್ಯವಾಗಿ ನನ್ನ ಹೆಂಡತಿ ಆದಿರಂತೆ!.. ಇಂದು ಈ ಮನುಷ್ಯರ ಸಾಕ್ಷ್ಯವಾಗಿ ನೀವು ನನ್ನ ಹೆಂಡತಿಯಂತೆ!.. ಆದರೆ.. ನಾನು ಯಾರು ? ಎಲ್ಲರ ಗುರುತು ಹಿಡಿಯುವ ರಾಮಣ್ಣನಿಗೆ ತನ್ನದೇ ಗುರುತ ಇಲ್ಲದಂತಾಗಿದೆ.. ( ಎದ್ದು ಮುಂದೆ ಬಂದು ) ಕೃಷ್ಣಾ-ತಾಯೀ, ಇಂದು ಸಮಾಜದ ಎಲ್ಲ ಹೆಂಗಸರಂತೆ, ಹೆಂಡಂದಿರಂತೆ ಇರಲು ನಿಮ್ಮ ಒಪ್ಪಿಗೆ ಇದೆಯೆ ?

**ಗೋಪಾಲಾಚಾರ್ಯ** :— ನಾಚಬೇಡಿರಿ, ಕೃಷ್ಣಾತಾಯೀ, ಯಾಕೆಂತೆಂದರೆ ನಾವೆಲ್ಲರೂ ಮನೆಯುವರು ಇದ್ದ ಹಾಗೆಯೆ.

**ಶೀನಣ್ಣ:**—( ಕಳಕಳಿಯಿಂದ ) ರಾಮೂ, ಎಂದಿನಿಂದಲೂ ನಿನಗಾಗಿ ಅಭಿಮಾನದಿಂದ ಬಾಳಿದ ಈ ಕೃಷ್ಣಾತಾಯಿಗೆ—

**ರಾಮಣ್ಣ:**—( ಹಟದಿಂದ ) ಅದಲ್ಲ— ನನಗೆ ಕೃಷ್ಣಾತಾಯಿಯೆ ಹೇಳಲಿ? ಕೃಷ್ಣಾತಾಯೀ, ಸಮಾಜದ ಎಲ್ಲ ಹೆಂಡಂದಿರಂತೆ ಇರಲು ನಿಮ್ಮ ಒಪ್ಪಿಗೆಯೆ?

**ಕೃಷ್ಣಾತಾಯಿ:**—( ಉಕ್ಕಿಬರುವ ದುಃಖವನ್ನು ತಡೆಯುತ್ತ ) ಇದು-ವರೆಗೆ ಮೋಸದಿಂದ ಇದ್ದದ್ದಕ್ಕೆ ಕ್ಷಮೆ ಬೇಡುವೆ.. ಸಮಾಜದ ಎಲ್ಲ ಹೆಂಡಂದಿರಿಗಿಂತ ನನ್ನ ಭಾಗ್ಯ ದೊಡ್ಡದು.. ಆ ಯೋಗ್ಯತೆ ನನ್ನಲ್ಲಿ ಬರುವಂತೆ—

**ರಾಮಣ್ಣ:**—(ನಡುವೆಯೆ) ಯಾವ ಯೋಗ್ಯತೆ? ನಮ್ಮ ಸಮಾಜದ ಎಲ್ಲ ಹೆಂಗಸರಿಗೆ, ಎಲ್ಲ ಹೆಂಡಂದಿರಿಗೆ ಒಂದೇ ಒಂದು ಯೋಗ್ಯತೆ ಇದೆ.. ಅದೆಂದರೆ, ಹುಟ್ಟನಿಂದ ಸಾಯುವವರೆಗೆ ವಿಧವೆಯಾಗಿ ಉಳಿಯುವದು.

**ಗೋಪಾಲಾಚಾರ್ಯ:**—( ಬೆದರಿ ) ಎಲ ಎಲ! ರಾಮಣ್ಣಾ, ಯಾಕೆಂತೆಂದರೆ, ಇದೇನು?

**ರಾಮಣ್ಣ:**—(ಅವನ ಕಡೆಗೆ ಲಕ್ಷ್ಯವಿಲ್ಲದೆ) ನಮ್ಮಲ್ಲಿ ಎಲ್ಲ ಹೆಂಗಸರೂ ವಿಧವೆಯರು.. ಅವರನ್ನು ಮದಿವೆ ಆಗುವ ಯೋಗ್ಯತೆಯ ಗಂಡಸು ಇದ್ದಾನೆಯೆ? ತಮ್ಮ ಇಷ್ಟವಿಲ್ಲದೆ ಮದಿವೆಯಾದ ಹೆಂಗಸರೆಲ್ಲ ಸನಾತನ ವೈದಿಕಧರ್ಮದ ವಿಧವೆಯರಲ್ಲವೆ?.. ಹೆಂಡತಿಗೆ ವೈಧವ್ಯವನ್ನು ತಂದು-ಕೊಡುವದೊಂದೇ ಗಂಡನ ಧರ್ಮದ ಅಧಿಕಾರವಲ್ಲವೆ?.. ಕೃಷ್ಣಾತಾಯೀ, ಇಂದು ನೀವು ವಿಧವೆ, ಎಂದಿನಂತೆ ವಿಧವೆ....

**ಶೀನಣ್ಣ:**—( ಉದ್ವೇಗದಿಂದ ) ರಾಮೂ, ರಾಮೂ, ಕೆಟ್ಟಮಾತು ಆಡಬೇಡ!.. ನನ್ನ ಸೊಸೆಯಂತಹ ಸಾಧ್ವಿಯನ್ನು—

**ಗೋಪಾಲಾಚಾರ್ಯ:**—( ನಡುವೆಯೆ ದರ್ಪದಿಂದ ) ಓಹೋ! ಯಾಕೆಂತೆಂದರೆ, ಅಲ್ಲಅನ್ನೋ ಬ್ರಾಹ್ಮಣ ಬರಲಿ ನನ್ನ ಮುಂದೆ!

**ವೆಂಕ:**—( ಒಮ್ಮೆಲೆ ) ಅಯ್ಯೊ! ಯಾರಿಗೂ ತಿಳಿಯುವದಿಲ್ಲವಲ್ಲ

ನಮ್ಮ ರಾಮಣ್ಣರಾಯರ ಮಾತು! ತತ್ಪಕ್ಕಾಗಿ ತಮ್ಮ ಜೀವ ಆಹುತಿ-ಯಾಗುವದಿದೆ, ಅದಕಾಗಿ ತಮ್ಮ ಪತ್ನಿಯವರು ಧೈರ್ಯದಿಂದಿರಬೇಕೆಂದು ಅವರು ಹೇಳುವದು. ( ರಾಮಣ್ಣನು ಬೇಜಾರವಾಗಿ ಕೈಚಲ್ಲಿ ಮತ್ತೆ ಕಲ್ಲು ಹಾಸುಗೆಯಲ್ಲಿ ಕುಳಿತುಕೊಳ್ಳುವನು ).

**ಶೀನಣ್ಣ:—** ( ತಿರಸ್ಕಾರದಿಂದ ) ಅಲ್ಲೋ, ಹುಚ್ಚಾ, ಜೀವದ ಆಹುತಿ ಎಲ್ಲಿಯದು ?

**ವೆಂಕ:—** (ತಿರಸ್ಕರದ ಹಟದಿಂದ) ನನಗೇನು ಕೇಳುವಿರಿ ? ಕೇಳಿರಿ— ನಿಮ್ಮ ಹಾಳು ಸಮಾಜಕ್ಕೆ. ಬೇಡಾದ ಜೀವ ಬೆಳೆಯಿಸಿ ಬೇಕಿದ್ದ ಜೀವವನ್ನು ನುಂಗಿ ನೀರು ಕುಡಿಯುವ ನಿಮ್ಮ ರಾಕ್ಷಸಸಮಾಜರೂಢಿಗೆ ಕೇಳಿರಿ..

**ಗೋಪಾಲಾಚಾರ್ಯ:—** ( ಕೆರಳಿ ) ಸುಮ್ಮನಾಗೋ, ಯಾಕೆಂ-ತೆಂದರೆ, ಇಲ್ಲದ ವೇಳೆಗೆ ಇಲ್ಲದ್ದು ಮಾತಾಡತಾ—

**ವೆಂಕ:—** (ಸಿಟ್ಟಿನಿಂದ)ಇಲ್ಲದ್ದು ! ಜೀವವನ್ನು ಕೊಂದಲ್ಲಿ ಕೊಂದವನ ಜೀವ ಹೊಡೆಯಬೇಕೆಂಬ ಹುಚ್ಚು ರೂಢಿ ಇಲ್ಲವೆ ಸಮಾಜದಲ್ಲಿ? ಕೊಳೆತ ಜೀವವನ್ನು ಕಡಿದೊಗೆದವನ ಜೀವವನ್ನು ಕೊಳೆಯಿಸಬೇಕೆಂಬ ರೂಢಿ ಇಲ್ಲವೆ ಸಮಾಜದಲ್ಲಿ? ತತ್ಪಕ್ಕಾಗಿ ಕೂಸನ್ನು ಕೊಂದ ರಾಮಣ್ಣ-ರಾಯರ ಜೀವವನ್ನು.

**ರಾಮಣ್ಣ:—** ( ಒಮ್ಮೆಲೆ ) ಎಲೊ ! ಮತ್ತೆ ಮತ್ತೆ ಮಾತುಗಳನ್ನು ಚುಚ್ಚಿ—

**ಶೀನಣ್ಣ:—** ( ವೆಂಕನಿಗೆ ) ಸುಮ್ಮನಾಗೊ ! ಹುಚ್ಚು ಹುಡುಗಾ ! ಸಿಟ್ಟಿನ ಭರದೊಳಗೆ ಏನಾದರೂ ಆಡಿದ್ದಕ್ಕೆ—

**ವೆಂಕ:—** ( ತಿರಸ್ಕಾರದಿಂದ ) ಓಹೊ ! ಹಿರಿಯರ ಮುಚ್ಚುವ ಜಾಣತನ ಅಲ್ಲವೆ ಇದು ಆದರೆ— ಅದಕ್ಕಾಗಿ ರಾಮಣ್ಣರಾಯರಿಗೆ ಅಭಿಮಾನವಿದೆ. ಅಭಿಮಾನದಿಂದಲೆ ನನಗೆ ಹೇಳಿದರು.

**ಕೃಷ್ಣಾತಾಯಿ :—** ( ಮುಂದೆ ಬಂದು ) ವೆಂಕಾಚಾರೀ, ದುಃಖದಿಂದ ಅವರು ಹಾಗೆ ಹೇಳಿದ್ದು. ಮನೆಯ ಪರಿಸ್ಥಿತಿಯಿಂದ ನಿಮ್ಮಂತಹರು

ಅವರನ್ನು ಸುಮ್ಮಸುಮ್ಮನೆ ಕೆಣಕುವರೆಂದು ಅವರ ಹೆಸರನ್ನು ಉಳಿಸುವದಕ್ಕೆ, ಅವರ ಯೋಗ್ಯತೆಯು ಅಭಿಮಾನದಿಂದ— ವೆಂಕಾಚಾರೀ, ವೆಂಕಾ—ಬೇಡಾದ ಆ ಕೂಸಿಗೆ ವಿಷ— ವಿಷವನ್ನು ನಾನು ಕೊಟ್ಟೆ— ಅಯ್ಯೋ—ನಾನು ಪಾಪಿ ! ಕ್ಷಮಿಸಿರಿ ನನ್ನನ್ನು—

ರಾಮಣ್ಣ:— (ಒಮ್ಮೆಲೆ ಮುಂದೆ ಬಂದು) ಇದೇನು— ಕೃಷ್ಣಾತಾಯೀ.. ಕೂಸು ಸತ್ತಿತು —

ಶೀನಣ್ಣ:— (ಏನೂ ತಿಳಿಯದೆ) ಎಲಲ.. ಛೆ..

ಕೃಷ್ಣಾ:— (ಮುಖಮುಚ್ಚಿ ಬಿಕ್ಕುತ್ತ) ಇಲ್ಲ.... ಅದನ್ನು ನಾನೇ.... ಅಯ್ಯೋ— ಕ್ರೂರಳಾದ ಈ ಹೆಂಗಸನ್ನು—

ರಾಮಣ್ಣ:— ಅಲ್ಲ— ಕೃಷ್ಣಾತಾಯೀ— ಕೂಸು ಸತ್ತಿತು—ಅದನ್ನು ಯಾರೂ ಕೊಂದಿಲ್ಲ—

ಗೋಪಾಲಾ:— (ಉಸುರ್ಗರೆದು) ಹಂ.. ಯಾಕೆಂತೆಂದರೆ, ಇದು ಇದ್ದ ಮಾತು. ಯಾಕೆಂತೆಂದರೆ, ಎಂದಿನಿಂದಲೂ ಹೇಳುತ್ತಿದ್ದೆ ನಾ.

ವೆಂಕ:— (ಬೆಪ್ಪಾಗಿ) ಯಾರೂ ಕೊಂದಿಲ್ಲ !

ಶೀನಣ್ಣ:— (ಒಮ್ಮೆಲೆ) ಯಾರೂ ಇಲ್ಲೊ, ಹುಚ್ಚಾ.. ಸುಮ್ಮಸುಮ್ಮನೆ ಬೊಬ್ಬಾಟ ! ಈಗ ರಾತ್ರಿಯೊಳಗೆ ಅದನ್ನೆಲ್ಲಾ ಸರಿಮಾಡಿಕೊಂಡು ಬರುವೆ....

ವೆಂಕ:— (ತಿರಸ್ಕಾರದಿಂದ) ಅಯ್ಯೋ— ಹುಚ್ಚು ! ಇಂದಿನ ಸಭೆಯಲ್ಲಿಯು ಅಭಿನಂದನದ ಗೊತ್ತುವಳಿ— ರಾಮಣ್ಣರಾಯರು ಕೂಸನ್ನು ಕೊಂದುದಕ್ಕಾಗಿ—

ರಾಮಣ್ಣ:— (ಒಮ್ಮೆಲೆ ತಿರುಗಿ) ಏನು.. ಸಭೆಯಲ್ಲಿ....

ವೆಂಕ:— (ಯಾರ ಕಡೆಗೂ ಲಕ್ಷ್ಯವಿಲ್ಲದೆ) ಅವರು ತಾವಾಗಿಯೆ ಹೇಳಿದ ಮಾತೆಂದು ಇಷ್ಟರೊಳಗಾಗಿಯೆ ವೃತ್ತಪತ್ರಗಳಲ್ಲಿ ಪ್ರಕಟಿಸಿರಬಹುದು—

ಶೀನಣ್ಣ:— (ಕಳವಳಗೊಂಡು) ಎಲೊ-ಅದೆಲ್ಲಾ-ಸುಳ್ಳು-ಗುರುಸಿದ್ಧಾ.. ನನ್ನ ಬಡಿಗೆ-ರುಮಾಲು—

ವೆಂಕ:— ( ಕೆಕ್ಕರಿಸಿ ) ಸುಳ್ಳು— ?

ಕೃಷ್ಣಾ:— ( ರಾಮಣ್ಣನಿಂದ ದೂರಾಗಿ) ಸುಳ್ಳಲ್ಲ— ನಾನು-ನಾನು ಕೊಂದಿರುವೆ.

ಶೀನಣ್ಣ:— ( ಕಳವಳದಿಂದ ) ಅಯ್ಯೋ ! ಎಲ್ಲರೂ ಕೂಡಿ ಆ ಕೂಸಿನ್ನ ಕೊಂದೀವಿ ಎಂದು ತಿಳಿಯಿರಿ.. ಸಾಕಲ್ಲೊ ?.. ಛೆ ಗುರುಸಿದ್ಧಾ-ಬಡಿಗೆ, ರುಮಾಲು—

ರಾಮಣ್ಣ:— ( ವೆಂಕಾಚಾರಿಯನ್ನು ದಿಟ್ಟಿಸಿ ) ವೆಂಕಾ, ಆ ಕೂಸನ್ನು ನಾವೇ— ನಾನೇ ಕೊಂದಂತೆ, ಅಲ್ಲವೆ ? ಮುಂದಿನ ಯೋಚನೆ ಮಾಡು-ವದು, ನಮ್ಮನಿಮ್ಮ ಕೆಲಸವಲ್ಲವೆ ?

ವೆಂಕ:— ( ತಲೆತೂಗಿ ) ಎಲ್ಲ ವ್ಯವಸ್ಥೆಯನ್ನು ಮಾಡಿರುವೆ. ಸಮಾ-ಜದ ನೀಚತನವೆಲ್ಲ ಬೈಲಿಗೆ ಬರುವದು. ಇಷ್ಟರಲ್ಲಿಯೆ ಪೋಲೀಸರು ಬರ-ಬಹುದು—

ಶೀನಣ್ಣ:— ಆಂ.. ಏನೊ.. ?( ಎಲ್ಲರೂ ಏನೂ ತಿಳಿಯದೆ ಚಕಿತ-ರಾಗುವರು. ಇಷ್ಟರಲ್ಲಿ ಯಾರೊ ಹೊರಬಾಗಿಲ ತಟ್ಟಿದ ಶಬ್ದ.... ಬೆಪ್ಪಾದ ಆಚಾರ್ಯ-ನಿಗೆ ಶೀನಣ್ಣನು ಸನ್ನೆ ಮಾಡಲು ಅವನು ಹೆದರುತ್ತ ಬಾಗಿಲುವರೆಗೆ ಹೋಗಿ— ಸ್ವಲ್ಪ ತೆರೆದು ಒಮ್ಮೆಲೆ ಮುಚ್ಚಿ ಉದ್ವೇಗದಿಂದ " ರಾಯರೆ, ಪೋಲೀಸರು— ಯಾಕೆಂ-ತೆಂದರೆ " ಎನ್ನುವಷ್ಟರಲ್ಲಿ— )

ಶೀನಣ್ಣ:— ( ವೆಂಕಾಚಾರಿಯನ್ನು ಬಲವಾಗಿ ರಟ್ಟೆಗಳಿಂದ ಹಿಡಿದು ) ಅಯ್ಯೋ— ನಿನ್ನ ತತ್ವಕ್ಕೆ ನನ್ನ ಜೀವ ಆಹುತಿ— ಮಾಡಿದೆಯಲ್ಲ !

ರಾಮಣ್ಣ:— ( ವೆಂಕಾಚಾರಿಗೆ ) ಅಲ್ಲೊ, ಮೂರ್ಖಾ— ( ಮತ್ತೆ ಬಾಗಿಲು ತಟ್ಟಿದ ಶಬ್ದ ).

ಶೀನಣ್ಣ:— ( ಹಣೆಬಡಿದುಕೊಂಡು ) ಹಾಳಾಯಿತು ನನ್ನ ಆಯುಷ್ಯ....!

( ಹೊರಗೆ ಮುಸುಕುತ್ತಿರುವ ಕತ್ತಲೆಯು ಒಳಗೆ— ಎಲ್ಲರ ಮನದೊಳಗೆ— ತುಂಬಿಕೊಂಡು ರಂಗಭೂಮಿಯಲ್ಲೆಲ್ಲಾ ಕತ್ತಲೆಯಾಗುವದು ).

ರಾಮಣ್ಣ:— ವೆಂಕಾ— ಏನು ಮಾಡಿದೆ ?

( ತೆರೆ )

---

# ನಾಲ್ಕನೆಯ ಅಂಕ

( ತೆರೆಯು ಏಳುವಾಗ ಯಾರೂ ಇಲ್ಲ. ಕೋರ್ಟಿನಲ್ಲಿಯ ಜಜ್ಜನ ವಿಚಾರಣೆಯ ಕೋಣೆ. ಕೆಲವು ನಿಮಿಷಗಳಲ್ಲಿಯೆ ಹೊರಬಾಗಿಲಿನಿಂದ ಪದ್ಮನಾಭಾಚಾರಿಯೂ ಒಬ್ಬ ತರುಣನೂ ಬರುವರು. ಆಚಾರ್ಯನು ಒಂದು ಬಗಲಬಂಡಿಯನ್ನು ತೊಟ್ಟು, ರುಮಾಲು ಸುತ್ತಿಕೊಂಡು, ದೋತರವನ್ನು ಹೊತ್ತಿದ್ದಾನೆ. ತರುಣನ ವೇಷವು— ಇದೀಗ ತರುಣರಿಗೆ ಸಹಜವಾದ ವೇಷ. ತಲೆಗೆ ಮಾತ್ರ ರುಮಾಲು ಸುತ್ತಿಕೊಂಡಿದ್ದಾನೆ. ಇಬ್ಬರೂ ಮಾತನಾಡುತ್ತಲೆ ಬರುವರು ).

**ಪದ್ಮನಾಭಾಚಾರಿ:—** ಅಲ್ಲೊ, ಇದರದೇನಾದೀತೂ ಅಂತ ನಿನಗೆ ಅನಿಸತದ ?

**ತರುಣ:—** ( ವಿಚಾರಿಯಂತೆ ) ಅದು ಈಗ ಹೇಗೆ ಹೇಳಲಿಕ್ಕೆ ಬಂದೀತು, ಆಚಾರ್ಯರೆ ? ಆರೋಪಿ ತರ್ಫೆ argument ಆಗಲಿ—

**ಪದ್ಮನಾಭ:—** ಹುಂ.. ಆ ಮೇಲೆ ನಿನಗೆ ಯಾಕೆ ಕೇಳಲಿ— ಜಜ್ಜಸಾಹೇಬರು ಹೇಳಿಯೆ ಹೇಳುವರು ತಮ್ಮ ನಿರ್ಣಯ.. ವಕೀಲ ಇರುವೆ ನೀನು— ಅದಕ್ಕೆ ನಿನಗೇನಾದರೂ ಗೊತ್ತಿದೆ ಏನೂ ಅಂತ ಕೇಳಿದೆ.

**ತರುಣ:—** ( ನಗೆಯಿಂದ ) ವಕೀಲ ಆದವರಿಗೆ ನಿರ್ಣಯ ಎಂದಿಗೂ ಹೇಳಲಿಕ್ಕೆ ಬರೋದಿಲ್ಲ ನೋಡಿರಿ, ಆಚಾರ್ಯರೆ. ಯಾವ ಪಕ್ಷ ವಹಿಸತೀವಿ ಆ ಪಕ್ಷದ ವತಿಯಿಂದ—

**ಪದ್ಮನಾಭ:—** ಯಾವದಾದರೊಂದು ಪಕ್ಷ ವಹಿಸಿರುವಿ ಅಂತ ತಿಳಿದುಕೊಂಡು ಹೇಳೋ, ಮಹಾರಾಯ !

**ತರುಣ:—** ( ನಕ್ಕು ) ಅದಕ್ಕೂ ಮುಂಚಿತ ಫೀ ಬೇಕು..

**ಪದ್ಮನಾಭ:—** ( ತಲೆತೂಗಿ ) ಓಹೊಹೊ ! ಫೀ ಕೊಟ್ಟು ಕೇಳಬೇಕಾದರೆ ನಿನ್ನ ಕಡೆಗೆ ಯಾಕೆ ಬರುತ್ತಿದ್ದೆ ? ಯಾವನಾದರೊಬ್ಬ ಹಳೆಬ ವಕೀಲನ ಕಡೆಗೆಯೆ ಹೋಗುತ್ತಿದ್ದೆ..

**ತರುಣ:—** ಹೊಸಬರು ಫೀ ತಕ್ಕೊಳ್ಳೋದಿಲ್ಲಾ ಅಂತ ನಿಮ್ಮ ಕಲ್ಪನೆ ಏನು ?

**ಪದ್ಮನಾಭ:—** ಅಲ್ಲೋ, ಹೊಸಬರಿಗೆ ಯಾರು ಕೊಡೋದೇ ಇಲ್ಲ ಅಂತ ! ( ನಗುವನು ) ಏನೇ ಇರಲಿ, ನಿನ್ನಂತಹರು ಎಷ್ಟೋ ಬೇಕು ನೋಡು. ಕೆಲಸ ಇಲ್ಲಾ ಅಂತ ಮಂದಿಯ ಕೆಲಸ ನೋಡಿಯಾದರೂ ಸಮಾಧಾನ ಹಚ್ಚಿಕೊಳ್ಳುವಿರಿ.

**ತರುಣ:—** ಇಲ್ಲ— ನಾನು ವಾಚಾಳರಾಯರ ಜೋಡಿ ಕೆಲಸ ಮಾಡತಿರತೀನಿ ರೂಢಿ ಮಾಡಿಕೊಳ್ಳಲಿಕ್ಕೆ !

**ಪದ್ಮನಾಭ:—** ( ಅವನನ್ನು ದಿಟ್ಟಿಸಿ) ವಾಹವ್ವಾ, ಅಂತೂ ವಾಚಾ-ಳರಾಯರಂತಹ ದೊಡ್ಡ ವಕೀಲರ ಆಶ್ರಯ ನಿನಗೆ ಸಿಕ್ಕಿತೂ ಅಂದರ ಇಂದಿಲ್ಲ ನಾಳೆ ನಿನ್ನ ದೈವ ತೆರೆದ ಹಾಗೆಯೆ. ಏನೆ ಇರಲಿ, ಈ ಹಾಳು ರಾಮಣ್ಣನಂತಹರ ಜೋಡಿ ಬಿದ್ದು ಕೆಟ್ಟ ಕೆಲಸ ಮಾಡೋದಿಲ್ಲ ನೀನು ! ( ಒಮ್ಮೆಲೆ ತಿರಸ್ಕಾರದಿಂದ ) ಅಲ್ಲೋ, ಎಷ್ಟು ಜಂಬ ಬಡಿಯುತ್ತಿದ್ದ ಒಂದು ನಾಲ್ಕು ಹುಡುಗರನ್ನು ಕೂಡಿಸಿಕೊಂಡು ! ಇವನಿಗೇನು ದಾಡಿಯಾಗಿತ್ತೆ ಹುಟ್ಟಿದ ಎಳೆಗೂಸಿನ್ನ ಕೊಲ್ಲಲಿಕ್ಕೆ ?

**ತರುಣ:—** ( ಅಸಮಾಧಾನದಿಂದ ) ಇದೇನು ಆಚಾರ್ಯರೆ, ರಾಮಣ್ಣ ಕೂಸಿನ್ನ ಕೊಂದದ್ದು ನಿಜ ಅಂತ ತಿಳಿದಿರೊ ಏನು ?

**ಪದ್ಮನಾಭ:—** ನಾವು ತಿಳಿಯೋದು ಯಾಕೋ ? ತಾನೇ ಬೊಗಳ-ತಾನಲ್ಲ ತನ್ನ ಬಾಯಿಯಿಂದಲೆ. . ಏನಿಲ್ಲ. . ಧರ್ಮಲಂಡರಿಗೆ ಒಂದಿಲ್ಲ ಒಂದು ದಿನ ಕಟ್ಟಿಟ್ಟದ್ದೆ ಇಂತಹ ಅವಸ್ಥೆ !

**ತರುಣ:—** ( ಅಸಮ್ಮತಿ ತೋರಿಸಿ ) ಛೆ— ಅವರು ಕೂಸಿನ್ನ ಕೊಂದದ್ದು ಸರ್ವಥಾ ಸುಳ್ಳು.

**ಪದ್ಮನಾಭ:—** ( ಹಿರಿತನದಿಂದ ) ಹುಚ್ಚ ಇರುವೆಯೊ ನೀನು ? ಒಂದು ನಾಲ್ಕು ಕಾಯಿದೆ ಪಾಠ ಮಾಡಿದರ ಎಲ್ಲ ತಿಳಿಯೋದಿಲ್ಲ— ಜನರ ಸ್ವಭಾವ ಗೊತ್ತಿರಬೇಕು ನೋಡು, ಚಲೋ ವಕೀಲ ಆಗಬೇಕಾದರ.

ನಾನು ಯಾವಾಗಲೂ ಹೇಳತಿರತೀನಿ— ವೈದಿಕ ಬ್ರಾಹ್ಮಣರ ಮಕ್ಕಳು ಉತ್ತಮ ವಕೀಲರು ಆಗುವರು ಅಂತ.

**ತರುಣ:—** ( ನಕ್ಕು ) ಹಾಗಾದರೆ ನಿಮ್ಮ ಹುಡುಗನ್ನ ವಕೀಲ ಮಾಡಲಿಲ್ಲ ಯಾಕೆ ?

**ಪದ್ಮನಾಭ:—** ದುಡ್ಡು ಇಲ್ಲೊ ಆ ಧಂದೆಯೊಳಗ ! ಮಂದಿ ಸತ್ತರೆ, ಕೆಟ್ಟರೆ ಶ್ರಾದ್ಧ ಮೊದಲಾದ ಕರ್ಮ ತಪ್ಪಿದ್ದಲ್ಲ— ಆದರೆ ಖಟ್ಲೆ-ಖೋಕಲೆ ಆಗಬೇಕು ಅಂತ ನಿಯಮ ಎಲ್ಲಿ? ಸತ್ತವರದೆಲ್ಲಾ ಶ್ರಾದ್ಧಕರ್ಮದ ದಕ್ಷಿಣಾ ನನಗೆ ತಪ್ಪದೆ ಸಿಗೋಹಾಗ, ಸತ್ತವರದೆಲ್ಲಾ ಖಟ್ಲೆ ವಕೀಲರಿಗೆ ದೊರಕತಾವೇನು ? ದುಡ್ಡು ಇಲ್ಲೊ ಈ ವಕೀಲಿ ಧಂದೆಯೊಳಗ ! ಏನೊ ದೊಡ್ಡ ವಕೀಲರ ಆಶ್ರಯ ದೊರಕಿಸಿರುವಿ ಅಂತ ನಿನಗ ಇಂದಿಲ್ಲ ನಾಳೆ ದುಡ್ಡು ಸಿಗಬಹುದು—

**ತರುಣ :—** ( ವಿಷಾದದಿಂದ ) ಎಲ್ಲಿಯ ಆಶ್ರಯ, ಆಚಾರ್ಯರೆ ? ದುಡ್ಡೆರಡು ದುಡ್ಡಿನ ಸಣ್ಣಸಣ್ಣ ಕೆಲಸಗಳನೆ ನನಗೆ ಒಪ್ಪಿಸತಾರ.

**ಪದ್ಮನಾಭ :—** ( ಅನುಭವಿಕನಂತೆ ) ಪ್ರಾರಂಭದಲ್ಲಿ ಹಾಗೆಯೆ ಮಾಡುವದು ! ಈಗ ನೋಡು, ಎಲ್ಲಿಯಾದರೂ ಜನ್ಮತಿಥಿ, ಹಬ್ಬ-ಹುಣ್ಣಿವೆ, ಚೌಲಕರ್ಮ— ಇಂತಹ ಸಣ್ಣ ಕೆಲಸಕ್ಕೆಯೆ ನನ್ನ ಮಗನನ್ನ ಕಳಿಸತೀನಿ. ಉತ್ತರಕ್ರಿಯಾ, ವಾರ್ಷಿಕ ಶ್ರಾದ್ಧ ಇಂತಹ ದೊಡ್ಡ ದೊಡ್ಡ ಜವಾಬ್ದಾರಿಯ ಕೆಲಸಕ್ಕೆ ನಾನೇ ಸ್ವತಃ ಟೊಂಕಕಟ್ಟಬೇಕಾಗತದೆ. ( ನಗೆಯಿಂದ ) ಇಲ್ಲಾ ಅಂದರ ನಮ್ಮ ಪಕ್ಷಗಾರರೂ ದುಡ್ಡು ಕೊಡಲಿಕ್ಕೆ ಒಪ್ಪೋದಿಲ್ಲ. . ( ಗಂಭೀರವಾಗಿ ) ಆದರೂ ವಕೀಲರಿಗೂ ವೈದಿಕ ಬ್ರಾಹ್ಮಣರಿಗೂ ಒಂದು ದೊಡ್ಡ ಭೇದ ನೋಡು.... ನಮ್ಮಲ್ಲಿ ಪ್ರಾಮಾಣಿಕತನ ಹೆಚ್ಚು, ಶ್ರದ್ಧಾ ಹೆಚ್ಚು. ಎಷ್ಟು ರೊಕ್ಕದ ಸುರಿಮಳೆ ಆದರೂ ದೇವಲಂಡ, ಧರ್ಮಲಂಡರ ಮನೆಗೆ ನಾವು ಹೋಗೋದಿಲ್ಲ. ಈಗ ನೋಡಬಾರದೆ ? ಶಿಶುಹತ್ಯೆಯಂತಹ ನೀಚ ಕೆಲಸ ಮಾಡಿದ ರಾಮಣ್ಣ ; ಅವನ ಪಕ್ಷಸಾಧಿಸಲಿಕ್ಕೆ ವಕೀಲ ಹಿಂದು-ಮುಂದು ನೋಡದೆಯೆ ಬಂದೇ ಬಿಟ್ಟ.

**ತರುಣ :—** ಛೆ-ಛೆ ಆಚಾರ್ಯರೆ— ಶೇಷಗಿರಿರಾಯರು ದುಡ್ಡಿನ

ಆಸೆಯಿಂದ ರಾಮಣ್ಣನ್ನ defend ಮಾಡತಾರ ಅಂತ ತಿಳಿದಿರೇನು? ಅವರೂ ಸಮಾಜಸುಧಾರಕ ಮುಂದಾಳು— ಸಮಾಜದಲ್ಲಿ ಜಾಗೃತಿ ಹುಟ್ಟಿಸಿದವರು. ಇದರಲ್ಲಿ ಒಂದು ಸಾಮಾಜಿಕ ಸಮಸ್ಯೆ— ಒಂದು ತಾತ್ವಿಕ ತೊಡಕು— ಅಡಕ ಆಗಿದೆ ಅಂತ ಅವರು ತಾವಾಗಿಯೆ ಇದನ್ನು ನಡೆಸಲಿಕ್ಕೆ ಮುಂದೆ ಬಂದದ್ದು !

**ಪದ್ಮನಾಭ :—** ( ತಿರಸ್ಕಾರದಿಂದ ) ಓಹೊ! ದೊಡ್ಡ ತೊಡಕು— ಹೇಳುವಂತಿಲ್ಲ ! ( ಮುಂದಿನ ಸಾಲಿನಲ್ಲಿ ಕುಳಿತುಕೊಂಡು ) ಅಲ್ಲೊ, ಪೋಲೀ-ಸರು ಹೋದಾಗ ಆ ಕೂಸಿನ್ನ "ನಾ ಕೊಂದೆ, ನಾ ಕೊಂದೆ" ಅಂತ ಒಬ್ಬರೊಬ್ಬರ ಮೇಲೆ ಹಾರಾಡತಾ ಹೇಳಿದರಂತೆ! ನೀಚ ಮುಂಡೇಮಕ್ಕಳ ಕೆಲಸ ! ತೊಡಕು ಅಂತೆ !

**ತರುಣ :—** ( ವಿಚಾರಿಸುವವನಂತೆ ) ಛೆ— ಏನೂ ಹೇಳುವಂತಿಲ್ಲ. ರಾಮಣ್ಣರಾಯರು ದೋಷಮುಕ್ತರೇ ಆಗಬಹುದೂ ಅಂತ—

**ಪದ್ಮನಾಭ:—** (ಅಣಕಿಸಿಂದ) ಓಹೊ ! ಆದರೂ ಆಗಬಹುದಪಾ! ಜನರೊಳಗೆ ಧರ್ಮಾ ಅಂಬೋದು ಉಳಿದಿದ್ದರೆ ಅಲ್ಲವೆ ನ್ಯಾಯ ಅಂಬೋದು ದೊರಕೋದು ! ಇಂತಹ ವಕೀಲರು ! ಅದರೊಳಗ ನಿಮ್ಮ ಜಜ್ಜ-ಸಾಹೇಬರೆದಂತೂ ಹೇಳುವ ಹಾಗೆಯೆ ಇಲ್ಲ ! ಮುಪ್ಪಿನೊಳಗ ಹೊಸ ಹೆಂಡತಿಯನ್ನ ಗಂಟುಹಾಕಿಕೊಂಡಾನ. ಒಂದು ವರ್ಷ ಆಯ್ತು ಮದಿವೆ ಆಗಿ—ಅಂದಿನಿಂದ ಇಂದಿನ ತನಕ ಒಬ್ಬರಿಗಾದರೂ ಶಿಕ್ಷಾ ಕೊಟ್ಟಾನೆಯೆ?.. ಹುಂ... ಇವರೆಲ್ಲಾ ವಿಷಯಲಂಪಟರೊ, ನಾರಾಯಣಾ, ಎಲ್ಲಾರು ವಿಷಯಲಂಪಟರು. ಆದರೂ ದೇವರ ನ್ಯಾಯ ಒಂದಿದೆಯಲ್ಲ !

**ನಾರಾಯಣ :—** ( ಅಭಿಮಾನದಿಂದ ) ನಮ್ಮ ಜಜ್ಜ ಅಂದರೆ ಯಾವಾಗಲೂ ತಕ್ಕಡಿಯಿಂದ ತೂಗಿ ನೋಡುವವರು. ಒಂದು ಗುಂಜಿಯ-ತೂಕ ಹೆಚ್ಚು— ಕೊರತೆ ಆಗೋ ಹಾಗಿಲ್ಲ. ಸಾಕ್ಷೀನೆ ಹಾಗಿದ್ದರ ಯಾರೇನು ಮಾಡಬಹುದು ? ನೀವೇ ಕೇಳಿದಿರೊ ಇಲ್ಲೊ, ಆ ಗೋಪಾಲಾ-ಚಾರ್ಯರ ಸಾಕ್ಷ್ಯ. ಕೂಸು ಸಾಯುವಾಗ ರಾಮಣ್ಣರಾಯರು ಅಲ್ಲಿದ್ದಿಲ್ಲ ಅಂತ ಹೇಳಲಿಲ್ಲವೆ ?

**ಪದ್ಮನಾಭ :—** ( ಅಣಕಿಸುತ್ತ ) ಯಾ-ಕೆಂ-ತೆಂ-ದ-ರ ಅವನೂ ವಿಷಯಲಂಪಟ ! ಮುಪ್ಪಿನೊಳಗ ಹರೆಯದ ಹುಡುಗೆಯನ್ನು ಮದಿವೆ ಆದವ— ಆ ಹುಡುಗೆ ಭಾವಿ ಬಿದ್ದಾಗ ಅವನನ್ನು ಉಳಿಸಿದ್ದರು ಅವರು— ಮುಂದಿನ ಕೆಲಸಕ್ಕ ಹೊಂಚು ಹಾಕಿ. ಗೋಪಾಲಾಚಾರಿ ಹೇಳಿದನಂತ ! ಅಲ್ಲೊ, ನಾರಾಯಣಾ, ನೀನು ವಕೀಲ ಆದದ್ದು ವ್ಯರ್ಥ ಅಂತ ಹೇಳಲಿಲ್ಲವೆ? ಹುಂ.... ನನಗ ಹೇಳತಾನ ವೈದಿಕಬ್ರಾಹ್ಮಣನ ಸಾಕ್ಷ್ಯದೊಳಗ ವಿಶ್ವಾಸ ಇಡಬೇಕಂತ ! ಕೂಡು, ಕೂಡು— ಜನರ ಸ್ವಭಾವ ಗೊತ್ತಿರಬೇಕೊ, ನಾರಾಯಣಾ, ಜನರ ಸ್ವಭಾವ ಗೊತ್ತಿರಬೇಕು ನೋಡು. ( ನಾರಾಯಣನು ಕುಳಿತುಕೊಳ್ಳುವನು. ಪದ್ಮನಾಭಾಚಾರಿಯು ಸುತ್ತ ಮುತ್ತ ನೋಡಿ ) ಇದೇನೊ ? ಇನ್ನೂ ಬಹಳ ಹೊತ್ತು ಬೇಕೇನೊ ?

**ನಾರಾಯಣ:—** ಇನ್ನೊಂದು ಅರ್ಧಗಂಟೆ ಬಹಳ ತಡ ಎಂದರೆ. ಈಹೊತ್ತೇನೊ ಸಾಹೇಬರ ಮನೆಯೊಳಗೆ ಏನೊ ಮಹತ್ವದ ಕೆಲಸ ಇದೆ ಅಂತ !....

**ಪದ್ಮನಾಭ:—** ಓಹೊ ! ತಿಳಿಯಿತು— ನಿನಗೆ ಹೇಳಿದೆ ಜನರ ಸ್ವಭಾವ ಗೊತ್ತಿರಬೇಕೂಅಂತ ( ಹತ್ತಿರ ಸರಿದು ಮೆಲುದನಿಯಲ್ಲಿ ) ಮಹತ್ವದ ಕೆಲಸ ಏನು ಗೊತ್ತಿದೆ ಏನು? ( ನಾರಾಯಣನು ಇಲ್ಲೆಂದು ತಲೆ ಅಲ್ಲಾಡಿಸುವನು ). ಹೆಂಡತೀನ್ನ ತವರು-ಮನೆಗೆ ಕಳುಹಿಸಿಕೊಟ್ಟಾನ ನಿಮ್ಮ ಸಾಹೇಬ. ಮಗ ಹುಟ್ಟುವದೊ, ಮಗಳು ಹುಟ್ಟುವದೊ ಅಂತ—

**ನಾರಾಯಣ:—** ( ಅಸಹ್ಯದಿಂದ ) ಛೆ— ಎಲ್ಲೆಲ್ಲಿಯದು ಏನೇನೊ ಸುದ್ದಿ ಹುಡುಕುವಿರಿ !

**ಪದ್ಮನಾಭ:—** ( ಹೆಮ್ಮೆಯಿಂದ ) ಎಲ್ಲೆಲ್ಲಿಯದೇನು ! ನಿಮ್ಮ ಆ ಕ್ರಾನಿಕಲ್, ಟಾಯಿಂಪೀಸದೊಳಗ ಬಂದರೆ ಮಾತ್ರ ಅದು ನಿಜವಾದ ಸುದ್ದಿ ಏನೊ ? ಒಂದು ದಿವಸ ಆ ಬ್ರಾಹ್ಮಣರ ಕಟ್ಟೆಗೆ ಬಂದು ಕೂಡು. ಇನ್ನೊಂದು ತಿಂಗಳ ಮೇಲೆ ಉಪವಾಸಬೀಳ್ತಾನ ಆ ಗಾಂಧಿ ಅಂತ ಈ ಹೊತ್ತೇ ನಮಗ ತಿಳಿದಿರತದೆ. ( ಬೇಜಾರದ ದನಿಯಲ್ಲಿ ) ಜನರ ಸ್ವಭಾವ ಗೊತ್ತಿರಬೇಕೊ, ನಾರಾಯಣಾ. ( ಒಮ್ಮೆಲೆ ) ಅಲ್ಲೊ, ಮತ್ತೆ ಎಲ್ಲಿ ಬೇರೆ ಖಟ್ಲೆ ನಡೆದಿದ್ದರೆ ಅಲ್ಲಿಯುವರೆಗೆ ಕೇಳತಾ ಕೂಡೋಣ ನಡೆ.

**ನಾರಾಯಣ:—** ಛೆ- ಛೆ- ಇಂತಹ ಮಹತ್ವದ argument ಮತ್ತೆಲ್ಲಿ ಸಿಕ್ಕೋದಿಲ್ಲ.

**ಪದ್ಮನಾಭ:—** (ತಿರಸ್ಕಾರದಿಂದ) ಮಹತ್ವ ಏನು ಸುಟ್ಟಿತು! ಸಾಯೋದೂ, ಕೆಡೋದೂ, ಕಡಿದಾಡೋದೂ ಕೊಲ್ಲೋದೂ— ನಡೆಯೋದೇ ದಿನಾಲು? (ಮತ್ತೆ ಹತ್ತಿರಬಂದು ಮೆಲುದನಿಯಲ್ಲಿ) ಅಲ್ಲೊ, ನಾರಾಯಣಾ, ಈ ಹೊತ್ತು ಯಾವದಾದರೊಂದು ಜಬರದಸ್ತಿಯ ವಿಚಾರಣೆ ಇಲ್ಲೇನು?

**ನಾರಾಯಣ:—** (ಸಂದರ್ಭ ತಿಳಿಯದೆ) ಅಂದರೆ?

**ಪದ್ಮನಾಭ:—** (ಮೆಲುದನಿಯಲ್ಲಿಯೆ) ಆ.. ಇದೊ.... ಅದಕ್ಕ.... ನೀವೇನೊ ಅಂತೀರಿ ನೋಡೊ.. (ಉಗುಳುನುಂಗಿ) ಜಬರದಸ್ತಿ– ಎಂತಹಾ ವಕೀಲನೊ ನೀನು ಇದು ಗೊತ್ತಿಲ್ಲಾ ಅಂದರೆ.. ಎಲ್ಲಿಯಾದರೂ ಯಾರಾದರೂ ಹೆಂಗಸರ ಮೇಲೆ ಬಲುಮೆ ಮಾಡಿರತಾರ ನೋಡೊ—

**ನಾರಾಯಣ:—** (ಅಸಹ್ಯದಿಂದ) ಅಂತಹದೆಲ್ಲಾ ಏನ ಕೇಳತೀರಿ, ಆಚಾರ್ಯರೆ?

**ಪದ್ಮನಾಭ:—** ಹುಚ್ಚನೊ ನೀನು! ಜನರ ಸ್ವಭಾವ ತಿಳಿದುಕೊಳ್ಳಲಿಕ್ಕೆ ಕೇಳೋದು. ಹೀಗೆ ನೀನು ನಾಚತಾ ಕೂತುಕೊಂಡರೆ ನಿನ್ನ ವಕೀಲಿ ಏನು ಬೆಳೆಯಬೇಕು—

**ನಾರಾಯಣ:—** (ಸ್ವಲ್ಪ ಸಿಟ್ಟಿನಿಂದ) ನನ್ನ ವಕೀಲಿ ಹಾಳಾಯಿತು, ಆಚಾರ್ಯರೆ. ಮತ್ತೊಂದು ವಿಷಯ ಮಾತಾಡಬಾರದೆ?

**ಪದ್ಮನಾಭ:—** (ಬೆರಗಾದವನಂತೆ) ಇದು ನೋಡು! ಕೋರ್ಟಿನೊಳಗ ಬಂದು ವಕೀಲರ ಸಲುವಾಗಿ ಮಾತಾಡಿದರ ತಪ್ಪೇನೊ? (ಮತ್ತೆ ನಾಲ್ಕಾರು ಜನ ಬಂದು ಹಿಂದಿನ ಸಾಲಿನಲ್ಲಿ ಕೂತುಕೊಳ್ಳುವದನ್ನು ನೋಡಿ) ಮತ್ತೆ, ನಾರಾಯಣರಾಯರೆ, ನನಗ ಕೇಳಿದಿರಿ ಅಂದರೆ ಆ ಕಲಮಿನ ಪ್ರಕಾರ— ಅಹುದಲ್ಲೊ ಹೇಳಿರಿ— ಏನೊ ತಾತ್ಪೂರ್ತಿಕ ಭ್ರಮ ಸೇರಿರಬೇಕು ರಾಮಣ್ಣನ ತಲೆಯೊಳಗ! ಯಾಕರಿ, ಏನಂತೀರಿ? (ಎಂದು ಹಿಂದೆ ನೋಡುವನು. ನಾರಾಯಣನೂ ಜನರು ಬಂದುದನ್ನು ನೋಡಿ ಉಸುರ್ಗರೆದು ಕಂಳಿತುಕೊಳ್ಳುವನು).

ಒಬ್ಬ:— ಅಹುದು— ನೋಡಿರಿ— ರಾಯರೆ—

ಪದ್ಮನಾಭ:— ನಾವು ಆಚಾರ್ಯರು, ಗೃಹಸ್ಥರಲ್ಲ—

ಇನ್ನೊಬ್ಬ:— ಅಹುದು ನೋಡಿರಿ, ಆಚಾರ್ಯರೆ. ಪಾಪ! ರಾಮಣ್ಣನಂತಹ ಇಂತಹ ಕೆಲಸಮಾಡಿದ ಅಂದರ ಯಾರಿಗೆ ವಿಶ್ವಾಸ ಕೂತೀತ್ರಿ? ಈ ಹೊತ್ತು ಆರೋಪಿ ವಕೀಲರೂ ಅದೇ ಹೇಳವರಿದ್ದಾರ— ಅಂತ ಸುದ್ದಿ. ರಾಮಣ್ಣಗ ಶಿಕ್ಷಾ ಆಗೋದಿಲ್ಲ— ಆಸ್ಪತ್ರಿಗೆ ಕಳಿಸತಾರ ಅಂತ ಅನುಮಾನ.

ಪದ್ಮನಾಭ:— (ವಿಷಾದದ ಸೋಗಿನಿಂದ) ಹುಚ್ಚ್ಹ ಹುಡುಗ— ಸುಮ್ಮನಾದರೂ ಕೂಡಬಾರದೆ? "ನಾನೇ ಮಾಡಿದೆ" ಅಂತ ಹೇಳ್ತಾನ! ಪಾಪ— ಅವನಿಗೆ ಶಿಕ್ಷಾ ಆದರ ಊರಿನ ಒಂದು ಶೋಭಾ ಹೋದ್ಹಾಗೆ ಆಗೋದು ನೋಡಿರಿ. ಯಾಕರೀ, ನಾರಾಯಣರಾಯರೆ? (ನಾರಾಯಣನು ಅಸಹ್ಯ ತೋರಿಸಿ ಸುಮ್ಮನಿರಲು ಹಿಂತಿರುಗಿ) ಇದನ್ನೆ ಹೇಳತಿದ್ದೆ ನಾನು ನಮ್ಮ ಹೊಸ ವಕೀಲರಿಗೆ.

ಒಬ್ಬ:— (ನಾರಾಯಣನನ್ನು ನೋಡಿ) ಓಹೊ! ಇವರೂ ವಕೀಲರೇನು?

ಪದ್ಮನಾಭ:— (ಹೆಮ್ಮೆ ತೋರಿಸಿ) ಅಹುದು. ಹೋದವರ್ಷ ಫಸ್ಟ-ಕ್ಲಾಸ ಬಂದರು. ಇಂದಿಲ್ಲ ನಾಳೆ ಸಬಜಡಜಿ ಆಗೋ ಯೋಗ ಇದೆ ಇವರಿಗೆ!

ಇನ್ನೊಬ್ಬ:— (ಮೆಲುದನಿಯಲ್ಲಿ) ರಾಮಣ್ಣರಾಯರಿಗೆ ಶಿಕ್ಷಾ ಆದೀತೇನು ಕೇಳಿರಿ ಅವರಿಗೆ.

ಪದ್ಮನಾಭ:— (ಕೊಂಕುನಗೆಯಿಂದ) ಉಹುಂ.. ಅಂತಹರಿಗೆ ಫೀ ಕೊಟ್ಟು ಕೇಳುವ ಯೋಗ್ಯತಾ ನಮ್ಮನಿಮ್ಮದಲ್ಲ.

ನಾರಾಯಣ:— (ದರ್ಪದ ದನಿಯಲ್ಲಿ) ಹಂ— ಸುಮ್ಮನಾಗಿರಿ. ಕೋರ್ಟು ಬಂದಿತು.

(ರಾಮಣ್ಣ, ಅಸೆಸರರು, ಸರಕಾರೀ ವಕೀಲ, ಆರೋಪಿ ವಕೀಲ, ಕಾರಕೂನ, ಕೋರ್ಟಿನ ಸಿಪಾಯಿ, ಜಜ್— ಮುಂತಾಗಿ ಕ್ರಮವಾಗಿ ಬರುವರು).

(ಕುಳಿತವರಲ್ಲಿ ಆಶೆ—ಆಕಾಂಕ್ಷೆಗಳು. ವಕೀಲರು ಕಾಗದಗಳನ್ನು ತಿರುವಿ-ಹಾಕುವರು).

**ಕಾರಕೂನ :—** ( ರಾಮಣ್ಣನಿಗೆ ) ಆರೋಪಿ, ಕೋರ್ಟಿಗೆ ಏನಾದರೂ ಅರಿಕೆ ಮಾಡಿಕೊಳ್ಳುವದಿದ್ದಲ್ಲಿ- ಮಾಡಿಕೊಳ್ಳಲು ಕೋರ್ಟಿನ ಅಪ್ಪಣೆ ಇದೆ.

**ರಾಮಣ್ಣ :—** ( ತಿರಸ್ಕಾರದಿಂದ ) ಅರಿಕೆ ? ಈ ಕೋರ್ಟಿನಲ್ಲಿ ? ಈ ತಮಾಷೆಯಲ್ಲಿ ನನ್ನದೇನಿದೆ ?.... ಆರೋಪಿ.... ಹಂ.. ಯಾರು ? ನಾನು ಆರೋಪಿಯೆ ? ಎಂದಿನಿಂದ ಹೇಳುತ್ತ ಬಂದುದನ್ನೆ ಮತ್ತೆ ಮತ್ತೆ ಹೇಳುವೆ— ಆರೋಪಿ ನಾನಲ್ಲ.. ಇಲ್ಲಿ ನೆರೆದವರೆಲ್ಲ ಆರೋಪಿಗಳು.. ದೇವನನ್ನು ಕುರಿತು, ಮನುಷ್ಯನನ್ನು ಮರೆತು, ಧರ್ಮದ ಹೆಸರಿನಿಂದ, ಸ್ವರ್ಗದ ಆಶೆಯಿಂದ, ಬೆಳೆಯಲಾರದ ಮಕ್ಕಳನ್ನು ಹಡೆದು, ಬೆಳೆಯಬೇಕಾದ ಹೆಂಗಸರನ್ನು ಆಹುತಿ ನುಂಗುವ ಎಲ್ಲರೂ ಇಂದು ಆರೋಪಿಗಳು.

**ಕಾರಕೂನ :—** ( ಅಬ್ಬಟೆಯಿಂದ ) ಇದುವರೆಗೆ ನಡೆದ ವಿಚಾರಣೆಯ ವಿಷಯವಾಗಿ ಏನಾದರೂ ಹೇಳುವದಿದ್ದರೆ— ಹೊಸ ಮಾತು—

**ರಾಮಣ್ಣ :—** ಇದೆ— ಹೇಳುವದಿದೆ.. ನಮ್ಮ ಸಮಾಜದಲ್ಲಿ ಮನೆಮನೆಯಲ್ಲಿ ಇಂತಹ ವಿಚಾರಣೆಯಾಗಲಿ.. ನಮ್ಮ ಸಮಾಜದಲ್ಲಿ ಜೀವಕಳೆಯಿಂದ ತುಂಬಿ ತುಳುಕಿ, ಉತ್ಸಾಹದಿಂದ ಉತ್ಸವದಿಂದ ಬಾಲಲೀಲೆ-ಗಳನ್ನಾಡಿ— ಸಮಾಜದ ಉದ್ಧಾರ ಮಾಡುವ ಬಾಲಗೋಪಾಲನ ಅವತಾರ ಬರುವವರೆಗೆ— ಆ ಬಾಲಗೋಪಾಲನ ಅವತಾರವು ಬರಲಿ ಎಂದು— ಪ್ರತಿಯೊಬ್ಬ ಸಂಸಾರಿಗನು ತನ್ನ ಅಕ್ಕತಂಗಿಯರಿಗೆ ಕಂಸನಾಗಲಿ, ಆ ರೀತಿಯಾದರೂ ಕೃಷ್ಣನ ಅವತಾರವಾಗಲಿ—ಆ ರೀತಿಯಾದರೂ ಗೋರಕ್ಷಣೆ ಮಾಡುವ ಮುದ್ದು ಗೋವಳನ ಅವತಾರವಾಗಿ ಹುಟ್ಟಿದ ಕೂಸುಗಳಿಗೆ ಹಸುಗಳ ಹಾಲು ದೊರಕಲಿ, ಆ ರೀತಿಯಾದರೂ ಮಾತೆಯ ಮೊಲೆಹಾಲ-ನ್ನುಂಡು ಕೂಸುಗಳು ಕುಣಿದಾಡಲಿ, ಬಂಧನದಲ್ಲಿ— ಸಂಸಾರಬಂಧನದಲ್ಲಿ ಬಳಲುತ್ತಿರುವ ತಮ್ಮ ಮಾತೆಯ ಬಿಡುಗಡೆ ಮಾಡುವ ಬಂಟ ಕೂಸು-ಗಳಾಗಲಿ— ಆ ರೀತಿಯಾದರೂ ನಮ್ಮ ತಾಯಂದಿರು, ನಮ್ಮ ಅಕ್ಕತಂಗಿ-ಯರು ಅಷ್ಟಮಪುತ್ರ ಸೌಭಾಗ್ಯವತಿಯರಾಗಲಿ.... ಆ.... ಆ.... ( ಬೆಮ್ಮೆಲೆ ತಡೆದು ) ಹೊಸ ಮಾತು ಹೇಳಬೇಕಾಗಿತ್ತಲ್ಲವೆ ?.. ನಾನು ಹೇಳುವದರಲ್ಲಿ ಹೊಸತೇನೂ ಇಲ್ಲ.. ಹಳೆಯುದನ್ನೆ ಹೇಳಿದೆ.. ಹೊಸತೆಂಪರೆ ನನ್ನ

ತಂದೆಗೆ ಮಗನಿಲ್ಲ, ಹೆಂಡತಿಗೆ ಗಂಡನಿಲ್ಲ, ತಂಗಿಗೆ ಅಣ್ಣನಿಲ್ಲ. ಆ ಮಾತೂ ಈ ಜಾಗೆಯಲ್ಲಿ ಹೊಸತಲ್ಲ. ಇಷ್ಟೆ.. ಹೇಳುವಂತಹ ಹೊಸ ಮಾತು ಜಗತ್ತಿನಲ್ಲಿಲ್ಲ.... ( ತಡೆಯುವನು ).

( ಕೆಲಹೊತ್ತು ನಿಃಶಬ್ದತೆ )

ಒಬ್ಬ:— ( ಮೆಲ್ಲಗೆ ) ಆಚಾರ್ಯರ, ಜಜ್ಜಸಾಹೇಬರು ತೂಕಡಿಸ-ತಾರಲ್ಲ !

ಪದ್ಮನಾಭ:— ( ನೋಡಿ ) ಪಾಪ ! ವಯಸ್ಸು ಆಗಿದೆ.... ಅಯ್ಯೊ ! ಸರಕಾರೀ ವಕೀಲ ಎದ್ದನು ನೋಡಿರಿ.. ಒದರಾಡಿ ಸಾಹೇಬರನ್ನ ಎಚ್ಚರಿ-ಸತಾನೊ ಏನೊ !

ಸ ವಕೀಲ:— .. .. .. ಕೇವಲ— ಆಚಾರ ಎಂದು ನಾನು ಮಾತಾಡುವದು. ಅಂಗೈಯ ಹುಣ್ಣಿಗೆ ಕನ್ನಡಿ ಯಾಕೆ ? ಆದರೂ ಜಗ-ತ್ತಿನಲ್ಲಿ ಮೋಸತನ ಎಷ್ಟು ಮೋಹಕವಾಗಿ, ಮರೆಯಾಗಿ ಮುಚ್ಚಿರುವ-ದಲ್ಲ ! ಎಂಬ ಕುತೂಹಲದಿಂದ ನಾನು ಮಾತಾಡುವದು. ಆರೋಪಿ ದೋಷಿ ಎಂಬುದನ್ನು ಒಡೆದು ಹೇಳಬೇಕಾಗಿಲ್ಲ. ಆದರೆ— ಸುಂದರವಾದ ಜಗತ್ತಿ-ನಲ್ಲಿ ಸುಖವಾಗಿ ಕಾಲಕಳೆಯಬೇಕೆಂದು ನಗುತ್ತಾ ಇಳಿದು ಬಂದ ಒಂದು ಕೋಮಲ ಕೂಸನ್ನು, ಒಂದು ಎಳೆಯ ಜೀವವನ್ನು, ಆ ಪರಮಾತ್ಮನ ಒಂದು ಕಲಾಸೃಷ್ಟಿಯ ನಿರ್ಮಾಣವನ್ನು ತಿಳಿದೂ ತಿಳಿದೂ ಮನವರಿಕೆ-ಯಾಗಿ ಹಿಚುಕಿ ಕೊಂದೊಗೆವ ಕಠೋರ ರಾಕ್ಷಸವೃತ್ತಿಗೆ ಯಾವ ಶಾಸನೆ ತಕ್ಕದು ಎಂಬುದನ್ನಷ್ಟೆ ನಾವು ವಿಚಾರಿಸಬೇಕಾದ್ದು. ತನ್ನನ್ನು ಉಣ್ಣಿಸಿ ಬೆಳೆಸಿದ ಸಮಾಜದ ಸ್ವಾಸ್ಥ್ಯದ ಮೂಲವನ್ನೆ ಕಿತ್ತೊಗೆಯುವಂತಹಾ ಸಮಾಜದ್ರೋಹಿಗೆ, ದೇವದೂಷಕನಿಗೆ ಯಾವ ಶಾಸನೆ ? ದೇವರ ಶಾಸನೆ ಇದ್ದೇ ಇದೆ ಎಂದು ನಾವು ಕೈಮುಗಿದು ಕುಳಿತರೆ ಆ ದೇವನಿಗೆ ನಾವೂ ದ್ರೋಹಿಗಳಾಗುವೆವು.. ಯಾವನಿಗೆ ಬೆಳೆಯುವ ಜೀವದ ಮಹತ್ವವಿಲ್ಲವೊ ಅಂತಹನ ಜೀವದಿಂದ ಸಮಾಜಕ್ಕೆ ಯಾವ ಉಪಯೋಗ ? ಇಂತಹ ಪಾಪಿಗಳಿಗೆ ಒಂದೇ ಶಾಸನೆ— — ಇನ್ನೊಮ್ಮೆ ಪಾಪ ಮಾಡಲು ಅವಸರ ಕೊಡದಂತಹ ಶಾಸನೆ.. ಪಾಪ ! ಆ ಎಳೆಗೂಸಿಗೆ ಮಾತಾಡಲು ಬಗುತ್ತಿ-

ದ್ದರೆ ಅದು ಏನು ಹೇಳಬಹುದಾಗಿತ್ತು! "ಅಯ್ಯೋ, ನನ್ನನ್ನು ಇಲ್ಲಿಗೆ ಕಳುಹಿಸಿದವ ಪರಮಾತ್ಮ.. ಅವನ ಮಾತನ್ನು ಕೇಳಿ ಬಂದೆನಲ್ಲದೆ— ಇಲ್ಲವಾದರೆ— ಅಯ್ಯೋ-ನನ್ನದೇನು ತಪ್ಪು?" ಎಂದು ಹಲಬುತ್ತಿತ್ತಲ್ಲವೆ? ಹಲ್ಲಿಲ್ಲದ ಬಾಯಿಯಿಂದ ಮತ್ತಿಷ್ಟು ಮುದ್ದಾದ ಮುಖದ, ಪಾಪವನ್ನು ಇನ್ನೂ ನೋಡದ್ದರಿಂದ ತಿಳಿಯಾಗಿ ಅರುಳುವ ಕಣ್ಣುಗಳ, ತಾಯಿಯ ಗರ್ಭದಲ್ಲಿ ಉಸಿರಾಡಿಸಿದ ಮಮತೆಯ ಹವೆಯಿಂದ ತುಂಬಿದ ಕೆನ್ನೆಗಳ— ಆ ಎಳೆಗೂಸನ್ನು .... ( ತಡೆದು ) ಹೆಚ್ಚಿಗೆ ಹೇಳುವದೇನು ? ಇದಕ್ಕೊಂದೇ ಶಾಸನೆ— ದೇಹಾಂತ ಶಾಸನೆ. ( ರಭಸದಿಂದ ಕುಳಿತುಕೊಳ್ಳುವನು ).

**ನಾರಾಯಣ:—** ( ಕಣ್ಣೀರು ಒರೆಸಿಕೊಳ್ಳುತ್ತ ) ಪಾಪ! ಮುಂದೆ ಕಂಠ ತುಂಬಿ ಮಾತೇ ಬರಲಿಲ್ಲ ಆತನಿಗೆ.

**ಪದ್ಮನಾಭ:—** ( ತಲೆತೂಗುತ್ತ ) ಛೆ! ಬಹಾಳ ಸರಸ ಮಾತಾಡುವವ ನೋಡು ಈತ! ತನಗ ಮಕ್ಕಳಿಲ್ಲದಿದ್ದರೂ— ಮಕ್ಕಳ ಸುಖ— ಮಕ್ಕಳಾಟ ಎಲ್ಲಾ ಗೊತ್ತಿದೆ ನೋಡು ಅವನಿಗೆ.

**ಒಬ್ಬ:—** ( ಆದರದಿಂದ ) ಶೇಷಗಿರಿರಾಯರು ಎದ್ದರು ನೋಡಿರಿ—

**ಶೇಷಗಿರಿ:—** ( ಗಾಂಭೀರ್ಯದಿಂದ ಎದ್ದು— )

[ As the Counsel is speaking with great vehemence enter a telegraph peon. The Court peon takes the telegram to the Judge who opens, reads its and smiles all over; passes it on to the Court-clerk; the latter, too, reads and smiles all over and passes its on to the P.P.; this last going through the same process, passes it on to the Counsel: who reads it, beams and suddenly checks the vehemence of his speech and congratulates the old Judge reading aloud the telegram. In the meanwhile another telegram has arrived and duly passed on to one of the Assessors—who opens it and suddenly cries out in agony. The P. P. sees the telegram and reads aloud the contents in sad tones— "Wife dead in

in Child-bed etc."... There is absolute silence in the Court. As if from-a-far comes the shrill hysterical laugh of Ramanna—followed by the thud of the curtain ].

END

[ ಸೂಚನೆ:— ಅಂಕ ೪ ರ ಬದಲಾಗಿ ಕೆಳಗೆ ಬರೆದ ದೃಶ್ಯವನ್ನು ಸರಿತೋರಿದಲ್ಲಿ ಆಡಬಹುದು ].

( ಮರುದಿವಸ ಮುಂಜಾನೆ. ಅಂಕ ೧ ರಲ್ಲಿಯಂತೆ ರಂಗಸಂನಿವೇಶ. ವೆಂಕಾಚಾರಿಯು ಹಾಸಿಗೆಯ ಮೇಲೆ ವೃತ್ತಪತ್ರವನ್ನು ಓದುತ್ತಾ ಕುಳಿತಿದ್ದಾನೆ. ರಾಮಣ್ಣನು ಬಲಬದಿಯ ಕುರ್ಚಿಯಲ್ಲಿ ಕುಳಿತು ಸಣ್ಣ ಮೇಜನ್ನು ಕೈಬೆರಳಿನಿಂದ ಬಡೆಯುತ್ತಾ ಉದಾಸೀನನಂತೆ, ವಿಚಾರಮಗ್ನನಂತೆ ಮುಖಮುದ್ರೆಯನ್ನು ತಾಳಿದ್ದಾನೆ. ಮೇಲಿಂದ ಮೇಲೆ ವೆಂಕಾಚಾರಿಯ ಕಡೆಗ ನೋಡುವನು— ಅವನು ತನ್ನನ್ನು ನೋಡುವಷ್ಟರಲ್ಲಿ ಮುಖ ತಗ್ಗಿಸುವನು; ಮತ್ತೆ ವೆಂಕಾಚಾರಿಯು ಸಿಟ್ಟಿನಿಂದ ಓದುತ್ತಲೆ ಕುಳಿತುಕೊಳ್ಳಲು 'ವೆಂಕಾ, ವೆಂಕಾ' ಎಂದು ಮೊರೆಯಿಡುವವನಂತೆ ಕರೆಯುವನು. ವೆಂಕಾಚಾರಿಯು ತಿರಸ್ಕಾರವನ್ನು ಸೂಚಿಸಿ ಮತ್ತೆ ಓದುವವನಂತೆ ನಟಿಸುವನು. ಇಷ್ಟರಲ್ಲಿ ಒಳಬಾಗಿಲಿನಿಂದ ಗೋಪಾಲಾಚಾರಿಯು ಬರಲು— )

**ರಾಮಣ್ಣ:—** ( ತಡವರಿಸುತ್ತ ಎದ್ದು ) ಬಂದೆ— ಬಂದೆ ಏನಾದರೂ ಬೇಕಾಗಿತ್ತೇನೊ ?

**ಗೋಪಾಲ:—** ( ಸಮಾಧಾನದಿಂದ ) ಏನೂ— ಏನೂ ಇಲ್ಲ, ರಾಮಣ್ಣಾ ; ಯಾಕೆಂತೆಂದರೆ— ಸುಮ್ಮಸುಮ್ಮನೆ ಇಷ್ಟು ಯಾಕೆ ಹೆದರಿಕೊಂಡಿರುವಿ ?

**ರಾಮಣ್ಣ:—** ( ಉಸಿರೆಳೆದು, ಅರ್ಧ ತನ್ನಷ್ಟಕ್ಕೆ ) ಹೆದರಿಕೆ-ಅಲ್ಲ-ಅತ್ತೆ-ಕರೆದಳಂತೆ, ಹೇಗಿದೆ ತಂಗಿಗೆ ?

**ಗೋಪಾಲಾ:—** ( ಆಶ್ಚರ್ಯದಿಂದ ) ತಂಗಿಗೆ ? ಯಾಕೆಂತೆಂದರೆ— ಅವರಿಗೆ ಮತ್ತೇನಾಗಿದೆ ?

**ರಾಮಣ್ಣ:—** ( ಅವನನ್ನು ದಿಟ್ಟಿಸಿ ) ಹೇಗಿದೆ— ಕೃಷ್ಣಾತಾಯಿಗೆ ? — ಮರೆತೆ-ಎಲ್ಲೆಲ್ಲಿಯದೊ ಕನಸು ಕಂಡಂತೆ ಆಗಿದೆ ನನಗೆ ?

**ವೆಂಕ:—** ( ತನ್ನಷ್ಟಕ್ಕೆ ಮಾತಾಡುವವನಂತೆ) ಕನಸು! ಮೈಮೇಲೆ ಎಚ್ಚರ ಇಲ್ಲದವರು ಕನಸನ್ನೆ ಕಾಣುವರಲ್ಲವೆ!

**ಗೋಪಾಲ:—** ( ಒಮ್ಮೆಲೆ ಅಸಹ್ಯದಿಂದ ಮಗನಿಗೆ ) ನಾಚಿಕೆಗೇಡಿ— ಯಾಕೆಂತೆಂದರೆ—

**ವೆಂಕ:—** ( ಮುಖವನ್ನೆತ್ತಿ ) ಯಾಕೆಂತೆಂದರೆ— ಯಾರು— ನಾಚಿಕೆಗೇಡಿ ?

**ಗೋಪಾಲ:—** ( ಸಿಟ್ಟಿನಿಂದ ) ನೀನು ; ಯಾಕೆಂತೆಂದರೆ— ಮಾತಾಡಿಸದೆ ಮಾತಾಡುವಂತಹ ನೀನು — ನೀನು ನಾಚಿಕೆಗೇಡಿ

**ವೆಂಕ:—** ( ವೃತ್ತಪತ್ರವನ್ನು ನೆಲಕ್ಕೆ ಅಪ್ಪಳಿಸಿ ) ಅಲ್ಲವೆ ? ನಾನೇ ನಾಚಿಕೆಗೇಡಿ ಅಲ್ಲವೆ ? ಮಾಡುವವೇನು ? ಈ ಮನೆಯಲ್ಲಿ ಕಾಲಿಟ್ಟ ಕೂಡಲೆ ನಾಚಿಕೆಗೇಡಿತನದ ಭೂತ ಬಡಿದುಕೊಳ್ಳುವದು ನನಗೆ. ನಾನಾದರೂ ಏನು-ಮಾಡಲಿ ?

**ಗೋಪಾಲ:—** ( ಮೋಲಿನಂತೆ ) ಏನು ಮಾಡಲಿ ಅಂತೆ ! ಯಾಕೆಂತೆಂದರೆ— ಭೂತ ಹೊಕ್ಕ ಹಾಗೆ ಹೊಕ್ಕುಬಿಟ್ಟಿರುವೆಯಲ್ಲ ಈ ಮನೆಯೊಳಗ?

**ವೆಂಕ:—** ( ಅವನನ್ನು ದಿಟ್ಟಿಸಿ ಒಂದೊಂದೇ ಶಬ್ದಗಳನ್ನು ಚುಚ್ಚುವವನಂತೆ ) ಈ ಮನೆಗೆ ಬಂದದ್ದು ನಾನಾಗಿಯೆ ಅಲ್ಲ-ನನ್ನ-ಹಿರಿಯರಾದ-ನಿಮ್ಮ-ಒಂದೊಂದೆ-ಹೆಜ್ಜೆಯ-ಮೇಲೆ-ಹೆಜ್ಜೆ-ಇಡುತ್ತ-ಬಂದಿರುವೆ- ಇಲ್ಲಿಗೆ.

**ಗೋಪಾಲ:—** ಈಗಾದರೂ ತಿಳಿಯಿತೊ ಇಲ್ಲೊ— ಯಾರು ಹಿರಿಯರೆಂಬುದು ? ಯಾಕೆಂತೆಂದರೆ— ನಡೆ ಇನ್ನು ಹೊರಗೆ. ಯಾಕೆಂತೆಂದರೆ— ಸುಮ್ಮಸುಮ್ಮನೆ ಬಂದು ರಾಮಣ್ಣರಾಯರನ್ನು ಕೆಣಕೋದು ! ನಡೆ, ನಡೆ— ಯಾಕೆಂತೆಂದರೆ— ಮಂಗ, ಶುದ್ಧ ಅವಿವೇಕಿ !

**ವೆಂಕ:—** ( ಸಿಟ್ಟು ತಡೆಯುತ್ತ ) ನಾನು ಬಂದದ್ದು ರಾಮಣ್ಣರಾಯರ ಕಡೆಗೆ ಅಲ್ಲ, ಶೀನಣ್ಣರಾಯರ ಕಡೆಗೆ. ನಾಚಿಕೆಗೇಡಿತನದ ಅಧಿಷ್ಠಾನದೇವತೆಯಾದ ಶೀನಣ್ಣರಾಯರ—

**ಗೋಪಾಲ:**— ( ಗಡ್ಡರಿಸಿ ) ಮುಚ್ಚೋ ಬಾಯಿಯನ್ನ— ಯಾಕೆಂತೆಂದರೆ— ಹಲ್ಲು ಮುರಿದೇನು ಒಂದೊಂದೆ.

( ಮೇಲಿನ ಮಾತುಗಳು ನಡೆದಾಗ ರಾಮಣ್ಣನು ಏನೂ ತಿಳಿಯದವನಂತೆ ಒಬ್ಬೊಬ್ಬರನ್ನು ನೋಡುತ್ತಿರುವನು ).

**ಗೋಪಾಲ :**— ( ಸಮಾಧಾನದಿಂದ ) ರಾಮಣ್ಣಾ, ಒಳಗೆ ನಡೆ ಅಣ್ಣಾ— ಯಾಕೆಂತೆಂದರೆ— ಇಲ್ಲಿ ಹವೆ ಕೆಟ್ಟದೆ— ಅದನ್ನು ಉಸುರಾಡಿಸಿದರೆ—

**ವೆಂಕ :**— ( ನಡುವೆಯೆ ) ಕುತ್ತಿಗೆ ಹಿಚುಕಿದಂತೆ ಆಗುವದಲ್ಲವೆ ಈ ಕೋಣೆಯ ಹವೆಯಲ್ಲಿ ?

(ರಾಮಣ್ಣನು ಮುಖಮುಚ್ಚಿಕೊಂಡು ಗಟ್ಟಿಯಾಗಿ ಬಿಕ್ಕುವನು. ಗೋಪಾಲನು ಅವಸರವಸರದಿಂದ ಮಗನ ಕಡೆಗೆ ನಡೆದುಬಂದು).

**ಗೋಪಾಲ :**— ( ಸಿಟ್ಟಿನಿಂದ ಮೆಲುದನಿಯಲ್ಲಿ ) ಏ, ಅವಲಕ್ಷಣಾ, ಅದೇ ಅದೇ ಮಾತನ್ನು— ಯಾಕೆಂತೆಂದರೆ— ಆಡಬೇಡ ಅಂತ ಎಷ್ಟು ಸಲ ಹೇಳಿಲ್ಲ ನಿನಗೆ ? ನಿನ್ನಿನ ದಿವಸ— ಯಾಕೆಂತೆಂದರೆ— ಒಮ್ಮೆ ಎಲ್ಲಾ ಆ ಮಾತು ಮುಗಿಸಿಬಿಟ್ಟದೆ. ( ರಾಮಣ್ಣನು ಮುಖವೆತ್ತಿದ್ದನ್ನು ನೋಡಿ ಗಟ್ಟಿಯಾಗಿ ) ಯಾಕೆಂತೆಂದರೆ— ಅದೂ ಸುಳ್ಳು, ಕೃಷ್ಣಾತಾಯಿ ಹೇಳಿದ್ದೂ ಸುಳ್ಳು ಅಂತ ನಿನ್ನೆಯೆ ಗೊತ್ತಾಗಿದೆ. ಯಾಕೆಂತೆಂದರೆ— ಪೋಲಿಸನವರೇ ಒಪ್ಪಿಕೊಂಡರು ಆ ಮಾತಿಗೆ.

**ವೆಂಕ :**— ( ಎದ್ದು ) ಮನಬಂದಂತೆ ಮಾತಾಡಿ ಆ ಮೇಲೆ ಒಪ್ಪಿಕೊಳ್ಳುವದು ಈ ಮನೆಯ ರೂಢಿ ಇದ್ದ ಹಾಗೆಯೆ ಇದೆ.

**ರಾಮಣ್ಣ :**— ( ಎದ್ದು ದೈನ್ಯದಿಂದ ) ವೆಂಕಾ, ವೆಂಕಾ, ನಿನಗೆ ತಿಳಿಯಬಾರದೆ ? ಕೃಷ್ಣಾತಾಯಿಯು ಕೂಸಿಗೆ ವಿಷ ಹಾಕುವದು— ಛೆ— ಎಂದೆಂದಿಗೂ ಸುಳ್ಳು.

**ವೆಂಕ :**— (ಕಟುಕತನದಿಂದ) ಸುಳ್ಳು— ಎಲ್ಲವೂ ಸುಳ್ಳು—ಸದ್ಯಕ್ಕೆ ಸುಳ್ಳನ್ನೆ ಹೇಳಬೇಕಾಗಿದೆ. ( ತಂದೆಯು ಮಾತನಾಡಬೇಕೆನ್ನಲು ) ಯಾಕೆಂತೆಂದರೆ—ಮದಿವೆ ಆಗುವದಿದೆ- ಅದಕ್ಕೆ ಸಾವಿರ ಸುಳ್ಳು ಹೇಳಲೇಬೇಕಲ್ಲವೆ?

( ಗೋಪಾಲಾಚಾರಿಯು ಕೈ ಚಲ್ಲುವನು)

**ರಾಮಣ್ಣ:—** ( ಮುಂದೆ ನಡೆದು ಬಂದು ) ವೆಂಕಾ, ವೆಂಕಾ, ನನಗೆ ಧೈರ್ಯವಿದೆ. ನೀನು ಇಷ್ಟೊಂದು ಹಂಗಿಸಿದರೂ ನನಗೆ ಧೈರ್ಯವಿದೆ.

**ವೆಂಕ:—** ( ತಿರಸ್ಕಾರದಿಂದ ) ಹುಂ.— ಇನ್ನೂ ನಿಮ್ಮ ಮಾತು ಹೇಳುವದು ಮುಗಿದಿಲ್ಲವೆ ? ಸಂಸಾರಿಗರಾದ ಮೇಲಾದರೂ ನಿಮ್ಮ ಬರಿಯ ಮಾತಾಡುವದು ಮುಗಿಯಬಹುದು ಅಂತ ಆಶಾ ಕಟ್ಟಿಕೊಂಡಿದ್ದೆ.— ಆಗಲಿ— ಏನೇನು ಹೇಳುವದಿದೆ— ಒಮ್ಮೆ ಮುಗಿಯಲಿ.

**ರಾಮಣ್ಣ:—** ವೆಂಕಾ, ಹೇಳುವದಿದೆ, ನನಗೆ ಇನ್ನೂ ಹೇಳುವದಿದೆ. ನಾನು ಸಂಸಾರಿಗನಾಗುವೆನಲ್ಲವೆ ?.. ಇನ್ನು ಸಂಸಾರಿಗನ ಜಬಾಬ್ದಾರಿ-ಯನ್ನು ಹೇಳಬೇಕಲ್ಲವೆ ?.. ಕೇಳು, ವೆಂಕಾ ; ನಿನಗೆ ಧೈರ್ಯವಿದ್ದರೆ ನನ್ನಂತೆ ಸಂಸಾರಿಗನಾಗು— ತಿರಸ್ಕಾರ ಬೇಡ— ನನ್ನಂತೆ ಎಲ್ಲರೂ ಸಂಸಾರಿಗರಾಗದ ಹೊರತು ಸಮಾಜದ ತಾರಣೆ ಇಲ್ಲ— ( ವೆಂಕಾಚಾರಿಯು ತಿರಸ್ಕಾರ ಸೂಚಿಸಿ ದೂರ ಸರಿಯುವನು ) — ( ಕಳಕಳಿಯಿಂದ ) ಎಲ್ಲರೂ ನನ್ನಂತೆ ಸಂಸಾರಿಗರಾಗಲಿ— ನಮ್ಮ ಸಮಾಜದಲ್ಲಿ ಮನೆಮನೆಯಲ್ಲಿ ಇಂತಹ ವಿಚಾರಣೆಯಾಗಲಿ.. ಜೀವಕಳೆಯಿಂದ ತುಂಬಿ ತುಳುಕಿ, ಉತ್ಸಾಹದಿಂದ ಉತ್ಸವದಿಂದ ಬಾಲಲೀಲೆಗಳನ್ನಾಡಿ ನಮ್ಮನ್ನು ಉದ್ಧಾರ-ಮಾಡುವ ಬಾಲಗೋಪಾಲನ ಅವತಾರವು ನಮ್ಮ ಸಮಾಜದಲ್ಲಿ ಬರುವ-ವರೆಗೆ, ಆ ಬಾಲಗೋಪಾಲನ ಅವತಾರವು ಬರಲಿ ಎಂದು, ಪ್ರತಿಯೊಬ್ಬ ಸಂಸಾರಿಗನು ತನ್ನ ಅಕ್ಕತಂಗಿಯರಿಗೆ ಕಂಸನಾಗಲಿ. ಕೃಷ್ಣನ ಅವತಾರಕ್ಕೆ ಕಂಸನೆ ಬೇಕಲ್ಲವೆ ? ಆ ರೀತಿಯಾದರೂ ಕೃಷ್ಣನ ಅವತಾರವಾಗಲಿ, ಆ ರೀತಿಯಾದರೂ ಗೋರಕ್ಷಣೆಮಾಡುವ ಮುದ್ದುಗೋವಳನ ಅವತಾರವಾಗಿ ಹುಟ್ಟಿದ ಕೂಸುಗಳಿಗೆ ಹಸುಗಳ ಹಾಲು ದೊರಕಲಿ, ಆ ರೀತಿಯಾದರೂ ಮಾತೆಯ ಮೊಲೆಹಾಲನ್ನುಂಡು ಕೂಸುಗಳು ಕುಣಿದಾಡಲಿ, ಬಂಧನದಲ್ಲಿ ಸಂಸಾರಬಂಧನದಲ್ಲಿ ಬಳಲುತ್ತಿರುವ ತಮ್ಮ ಮಾತೆಯ ಬಿಡುಗಡೆಮಾಡುವ ಬಂಟ ಕೂಸುಗಳಾಗಲಿ, ಆ ರೀತಿಯಾದರೂ ನಮ್ಮ ತಾಯಂದಿರು—

ನಮ್ಮ ಅಕ್ಕತಂಗಿಯರು ಅಷ್ಟಮಪುತ್ರ ಸೌಭಾಗ್ಯವತಿಯರಾಗಲಿ, ಆ ರೀತಿಯಾದರೂ—

**ವೆಂಕ:—** ( ಒಮ್ಮೆಲೆ ತಿರಸ್ಕಾರದಿಂದ ) ಲಕ್ಷ್ಮೀರಮಣ ಗೋವಿಂದಾ — ಗೋವಿಂದಾ— ಇನ್ನು ಊಟಕ್ಕೆ ಪ್ರಾರಂಭವಾಗಲಿ. ( ಕೆರಳಿ ) ಮಾತು, ಮಾತು, ಬರಿಯ ಮಾತು.

**ಗೋಪಾಲ:—** ( ಸಿಟ್ಟಿನಿಂದ ) ಸುಮ್ಮನಾಗೊ— ಅವಲಕ್ಷಣಾ— ಯಾಕೆಂತೆಂದರೆ— ಎಲ್ಲಾರಕಿಂತ ಹೆಚ್ಚು ಮಾತಾಡುವವ ತಾನು! ಮತ್ತೆ ಮುಂದಿಗೆ ಹೇಳತಾನ!

**ವೆಂಕ:—** ( ರೇಗಿ ) ನಾನು— ( ಗೋಪಾಲಾಚಾರಿಯು ಅವನ ಬಾಯಿ-ಮುಚ್ಚಿ ಒಳಗಿನಿಂದ ಯಾರೊ ಬರುವವರಿದ್ದಾರೆಂದು ಸನ್ನೆಮಾಡುವನು. ಇಷ್ಟರಲ್ಲಿ ಒಳಗಿನಿಂದ ಶೀನಣ್ಣನೂ ಕೃಷ್ಣಾತಾಯಿಯೂ ಬರುವರು ).

**ಶೀನಣ್ಣ:—** ಕೃಷ್ಣಾತಾಯೀ, ಅದಕ್ಕೆ ಹೇಳಿದೆನಲ್ಲ— ಯಾಕರೀ, ಗೋಪಾಲಾಚಾರ್ರೆ, ಈ ಮನೆಯ ಕಾಲ್ಗುಣ ನೆಟ್ಟಗಿಲ್ಲ ಅಂತ ನಾನು ಹೇಳೋದು ನಿಜ ಅಲ್ಲ?

**ಗೋಪಾಲ:—** ( ತಲೆತೂಗಿ ) ನಿಜ— ಯಾಕೆಂತೆಂದರೆ— ಅದು ಸುಳ್ಳು ಹೇಗಾದೀತು, ರಾಯರೆ?

**ಕೃಷ್ಣಾತಾಯಿ:—** ನೀವು ಯಾವ ಮನೆ ಹುಡುಕಿದರೇನು? ಎಲ್ಲಿಗೆ ಹೋದರೇನು? ಎಲ್ಲೆಲ್ಲಿ ನನ್ನಂತಹ ಹೆಂಗಸು, ( ರಾಮಣ್ಣನನ್ನು ತೋರಿಸಿ ) ಅವರಂತಹ ಗಂಡಸು ಇರುವರೊ ಅಲ್ಲಲ್ಲಿ ಎಲ್ಲವೂ ಕೆಟ್ಟದ್ದೇ.... ನಮ್ಮಂತ-ಹರು— ಎಲ್ಲಿ ನೋಡಿದಲ್ಲಿ ತುಂಬಿದ್ದಾರೆ?.. ಹೋಗುವದೆಲ್ಲಿ?

**ಗೋಪಾಲ:—** ( ನಗೆಯಿಂದ ) ಏನು, ಕೃಷ್ಣಾತಾಯೀ, ಯಾಕೆಂ-ತೆಂದರೆ, ಗಂಡನ ಜೋಡಿ ಸಂಸಾರ ಮಾಡಬೇಕೂ ಅಂಬೋದುನ್ನ ನಾನು ಹೇಳಬೇಕೆ ನಿಮಗೆ?

**ವೆಂಕ:—** ( ಗಾಂಭೀರ್ಯದ ಸೋಗಿನಿಂದ ) ಹೆಂಡತಿಯನ್ನು ಕೊಲ್ಲು-ವವರು ಹೇಳಬೇಕೆ?

**ಗೋಪಾಲ:**— ಹಾಂ— ( ಎದ್ದು ಗದ್ದರಿಸುವನು ).

**ಕೃಷ್ಣಾ:**— ಗೋಪಾಲಾಚಾರ್ಯರೆ, ಯಾಕೆ ಸುಮ್ಮಸುಮ್ಮನೆ ಸಿಟ್ಟಗೇಳುವಿರಿ ? ನಾನು ಸಾಧ್ವಿ ಎಂದು ನಿನ್ನೆ ಹೇಳಲಿಲ್ಲವೆ— ನನ್ನ ಮಾವನವರು ? ನಾನು ಎಲ್ಲ ಹೆಂಗಸರಂತೆ ನಡೆಯಬೇಕೆಂದು ರಾಮಣ್ಣ-ರಾಯರು,— (ರಾಮಣ್ಣನು ಮುಖಮುಚ್ಚಿ ಕೊಂಡುದನ್ನು ನೋಡಿ ತಡೆಯುವಳು)

**ಗೋಪಾಲ:**— ( ನಗುತ್ತ ) ಓಹೊ ! ಹೆಸರು ನುಡಿದದ್ದಕ್ಕೆ ನಾಚಿ-ಗೊಂಡರು ಕೃಷ್ಣಾತಾಯಿ, ಯಾಕೆಂತೆಂದರೆ, ಇಷ್ಟರೊಳಗಾಗಿಯೆ ನಾಚಿಗೊಂಡರು !

**ಕೃಷ್ಣಾ:**— ನನಗೆ ನಾಚಿಕೆ ಬಂದಿತಲ್ಲವೆ ? ಗಂಡನ ಹೆಸರನ್ನು ಮಾತ್ರ ಹೇಳುವಾಗ ನಾಚುವ ನಾನು ಪತಿವ್ರತೆಯೆ ಅಲ್ಲವೆ ?. . ನಾನು ಪತಿವ್ರತೆ.... ಎಲ್ಲ ಪತಿವ್ರತೆಯರಂತೆ ಪತಿಯ ಮಾತನ್ನು ನಡೆಸಬೇಕಲ್ಲವೆ ನಾನು ?. . . . ನಡೆಸುವೆ. . ಅವರು ಹೇಳಿದಂತೆಯೆ ನಡೆಯುವೆ. . ಅವರು ಹೇಳಿದಂತೆ ನಾನು ವಿಧವೆಯಾಗುವೆ— ಆಗಿರುವೆ.

**ಗೋಪಾಲ:**— ) ಅಯ್ಯೊ—ಯಾಕೆಂತೆಂದರೆ—
**ಶೀನಣ್ಣ:**— ) ಎಲ— ಛೆ—

**ಕೃಷ್ಣಾ:**— ತಡೆಯಿರಿ.... ನಾನು ವಿಧವೆ. . ನನಗೆ ಗಂಡನಿಲ್ಲ— ರಾಮಣ್ಣನಂತಹರೆಲ್ಲರೂ ನನಗೆ ಗಂಡಂದಿರು. . ನನಗೆ ಮಗು ಇಲ್ಲ— ರಾಮಣ್ಣನಂತಹರೆಲ್ಲರೂ ನನ್ನ ಮಕ್ಕಳು. . ನನಗೆ ಮನೆಯಿಲ್ಲ—ನಾನು ಎಲ್ಲ ಮನೆಗಳಲ್ಲಿರುವೆ. . ನಾನು ಕೃಷ್ಣಾತಾಯಿ— ಅಲ್ಲ. . ತಂದೆಗೆ ದುಃಖ ತಂದು, ಹುಟ್ಟಿದ ಮನೆ ಹಾಳುಮಾಡುವ ರೂಢಿಯ ಹೆಣ್ಣು-ಮಗಳು ನಾನಲ್ಲ; ಹೊಕ್ಕ ಮನೆಯಲ್ಲಿ ಹೇಸಿಕೆ ಹೆದರಿಕೆ ಹಬ್ಬಿಸುವ ಹೆಂಡತಿ ನಾನಲ್ಲ.... ನಾನು ಹೆಂಗಸು. . ಗಂಡಸರಿಗೆ ನಾನು ಹೆಂಗಸು.... ಬೆಳೆಯದ ಮಕ್ಕಳನ್ನು ಹಡೆಯುವ ತಾಯಿ ನಾನಲ್ಲ, ಹುಟ್ಟಿದ ಮಕ್ಕಳನ್ನು ಬೆಳೆಸುವ ಮಾತೆ ನಾನು. ಅದಕಾಗಿ ಇಂದು, ಎಲ್ಲರಂತೆ ಈ ರಾಮಣ್ಣ-ರಾಯರು ಈ ಹೆಂಗಸಿಗೆ ಸಹೋದರ, ಈ ಮಾತೆಗೆ ಮಗು.... ಇದೇ—ಇದೇ

ನನ್ನ ಹೊಸ ಸಂಸಾರ.... ಇದೇ ಎಂದಿಗೂ ಹೆಂಗಸಿನ ಸಂಸಾರ.. ಇದೇ ಇದೇ ನನ್ನ ಸುಖ.... ಇದೇ ನನ್ನ ದುಃಖ (ರಾಮಣ್ಣನಿಗೆ) ಒಪ್ಪಿಗೆಯೆ ನಿಮಗೆ?

ಶೀನಣ್ಣ :— ಕೃಷ್ಣಾತಾಯೀ, ಕೃಷ್ಣಾತಾಯೀ, ವಿಚಾರದಿಂದ ಯಾಕೆ ದುಃಖಬಡುವೆ?.. ಅಯ್ಯೋ— ಎಂತಹ ಗೋಳು ನನ್ನ ಹುಡುಗರದು? ದೇವರೆ, ಏನು ಈ ಧರ್ಮತೊಂದರೆ?.. ಅಯ್ಯೋ— ಇದಕಾಗಿಯೆ ನಾನು ಸಂಸಾರಿಗನಾದೆನೆ?.. ಛೆ.. ಥೂ— ಎಲ! (ಎಂದು ಹಣೆಬಡೆದುಕೊಳ್ಳುವನು. ರಾಮಣ್ಣನು ಮುಖ ತಿರುಗಿಸಿ ಹೊರಡುವನು. ವೆಂಕಾಚಾರಿಯು ತಿರಸ್ಕಾರದಿಂದ ಉಸಿರೆಳೆಯುವನು. ಗೋಪಾಲಾಚಾರಿಯು ತಿಳಿಯದೆ ಬಾಯಿ ತೆರೆಯುವನು. ಕೃಷ್ಣಾತಾಯಿಗೆ ದುಃಖ ತುಂಬಿ ಬಂದು ಮುಖದಲ್ಲಿ ಅದೊಂದು ಸಾತ್ವಿಕ ಕಳೆ ಕಾಣುವದು).

(ತೆರೆ)

---